# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೭ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೬, ೨೦೧೨ (ಭಾದ್ರಪದ ೧೫, ಶಕ ವರ್ಷ ೧೯೩೪) | ಸಂಚಿಕೆ ೩೬ |
|---|---|---|


## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಇಂಧನ ಸಚಿವಾಲಯ

**ವಿಷಯ:** ಮೆ:: ಮಿನೇರ ಸ್ಟೀಲ್ ಆಂಡ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರು ಅನುಷ್ಠಾನಗೊಳಿಸಿರುವ 1.25 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ : ನಿಕತ್‌ನೂರ್ ರವರಿಗೆ ವರ್ಗಾಯಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 211 ಎನ್‌ಸಿಇ 2009 ದಿನಾಂಕ: 31.3.2009.

2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 233 ಎನ್‌ಸಿಇ 2011 ದಿನಾಂಕ: 06.6.2011.

3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: KRED/08/NN-Minera-1.25 MW (R-385)/MSPPL/2012/851 ದಿನಾಂಕ: 09/14.3.2012 ಮತ್ತು KRED/08/NN-Minera-1.50 MW (K-316)/MSPPL/2012/1589 ದಿನಾಂಕ: 15.5.2012/11.6.2012

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಸರ್ಕಾರಿ ಆದೇಶದಲ್ಲಿ ಮೆ : ಸರ್ಜಾನ್ ರಿಯಾಲಿಟೀಸ್ ಪ್ರೈವೇಟ್ ಲಿಮಿಟೆಡ್ ರವರಿಗೆ ಬಳ್ಳಾರಿ ಜಿಲ್ಲೆಯ ವಿವಿಧ ಗ್ರಾಮಗಳಲ್ಲಿ ಹಂಚಿಕೆಯಾಗಿದ್ದ 21 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ ಬಳ್ಳಾರಿ ಜಿಲ್ಲೆಯ ಹೂವಿನ ಹಡಗಲಿ ತಾಲ್ಲೂಕಿನ ಹಲ್‌ತಿಮ್ಮಲಾಪುರ ಗ್ರಾಮದಲ್ಲಿನ (ಸರ್ವೆನಂ.1 WTG Location No.(LOC) K.385) 1.25 ಮೆ.ವ್ಯಾ. ಸಾಮರ್ಥ್ಯವನ್ನು ಮೆ: ಕೆಎಂಎಂಐ ಸ್ಟೀಲ್ ಪ್ರೈವೇಟ್ ಲಿಮಿಟೆಡ್ (ಹಂತ–1) ರವರಿಗೆ ವರ್ಗಾಯಿಸಿ ಆದೇಶಿಸಲಾಗಿತ್ತು. ಈ ಸಾಮರ್ಥ್ಯದ ಯೋಜನೆಯು ದಿನಾಂಕ :31.03.2009ರಲ್ಲಿ ಅನುಷ್ಠಾನಗೊಂಡಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಸರ್ಕಾರಿ ಆದೇಶದಲ್ಲಿ ಮೆ: ಕೆಎಂಎಂಐ ಸ್ಟೀಲ್ ಪ್ರೈವೇಟ್ ಲಿಮಿಟೆಡ್ ಹೆಸರನ್ನು ಮೆ : ಮಿನೇರ ಸ್ಟೀಲ್ ಆಂಡ್ ಪವರ್ ಪ್ರೈವೇಟ್ ಲಿಮಿಟೆಡ್ ಎಂದು ಬದಲಾಯಿಸಲು ಅನುಮೋದನೆ ನೀಡಲಾಗಿತ್ತು.

ಮೆ : ಮಿನೇರ ಸ್ಟೀಲ್ ಆಂಡ್ ಪವರ್ ಪ್ರೈವೇಟ್ ಲಿಮಿಟೆಡ್ ರವರು ಅನುಷ್ಠಾನಗೊಳಿಸಿರುವ 1.25 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ:: ನಿಕತ್‌ನೂರ್ ರವರಿಗೆ ವರ್ಗಾಯಿಸುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಪತ್ರಗಳಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಇವರು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಹಾಗೂ ಸದರಿ ಪತ್ರದಲ್ಲಿ ಈ ಯೋಜನಾ ಸ್ಥಳದ ಸರ್ವೆ ನಂ. 1ರ 1 ಎಕರೆ ಜಮೀನು ಕಂದಾಯ ಜಮೀನಾಗಿದ್ದು, ಉತ್ಪಾದನೆಯಾಗುವ ವಿದ್ಯುತ್ತನ್ನು ಸರಬರಾಜು ಮಾಡಲು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ ವಿದ್ಯುತ್ ಖರೀದಿ ಒಪ್ಪಂದವನ್ನು ಮಾಡಿಕೊಳ್ಳುವುದಾಗಿ ಅಭಿವೃದ್ಧಿದಾರರು ತಿಳಿಸಿರುತ್ತಾರೆಂದು ವರದಿ ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 135 ಎನ್‌ಸಿಇ 2012, ಬೆಂಗಳೂರು, ದಿನಾಂಕ:29.06.2012.**

ಮೆ : ಮಿನೇರ ಸ್ಟೀಲ್ ಆಂಡ್ ಪವರ್ ಪ್ರೈವೇಟ್ ಲಿಮಿಟೆಡ್ ರವರು ಬಳ್ಳಾರಿ ಜಿಲ್ಲೆಯ ಹೂವಿನ ಹಡಗಲಿ ತಾಲ್ಲೂಕಿನ ಹಲ್‌ತಿಮ್ಮಲಾಪುರ ಗ್ರಾಮದಲ್ಲಿ (ಸರ್ವೆನಂ.1 WTG Location No.(LOC) K.385) ಅನುಷ್ಠಾನಗೊಳಿಸಿರುವ 1.25 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ:: ನಿಕತ್‌ನೂರ್ ರವರಿಗೆ ಈ ಕೆಳಕಂಡ ಷರತ್ತಿಗೊಳಪಟ್ಟು ವರ್ಗಾಯಿಸಲು ಅನುಮೋದನೆ ನೀಡಲಾಗಿದೆ :–

1 **ಮೆ:: ನಿಕತ್‌ನೂರ್** ಕಂಪನಿಯವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 2011 ದಿನಾಂಕ:06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.

2 **ಮೆ:: ನಿಕತ್‌ನೂರ್** ಕಂಪನಿಯವರು ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ ವಿದ್ಯುತ್ ಖರೀದಿ ಒಪ್ಪಂದವನ್ನು ಮಾಡಿಕೊಳ್ಳತಕ್ಕದ್ದು.

3 ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೌಸಲ್ಯಾ**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ,

**ಪಿ.ಆರ್. 1808**

## ಇಂಧನ ಸಚಿವಾಲಯ

**ವಿಷಯ:** ಮೆ:: ಮಿನೇರ ಸ್ಟೀಲ್ ಆಂಡ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರು ಅನುಷ್ಠಾನಗೊಳಿಸಿರುವ 1.50 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ : ನಿಕತ್‌ನೂರ್ ರವರಿಗೆ ವರ್ಗಾಯಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 76 ಎನ್‌ಸಿಇ 2008 ದಿನಾಂಕ: 20.8.2008.

2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 233 ಎನ್‌ಸಿಇ 2011 ದಿನಾಂಕ: 06.6.2011.

3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: KRED/08/NN-Minera-1.50 MW (K-316)/ MSPPL/2012/852 ದಿನಾಂಕ: 09/14.3.2012 ಮತ್ತು KRED/08/NN-Minera- 1.50 MW (K-316)/MSPPL/2012/1589 ದಿನಾಂಕ: 15.5.2012/ 11.6.2012

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಸರ್ಕಾರಿ ಆದೇಶದಲ್ಲಿ ಮೆ : ಸುಜ್ಲಾನ್ ಎನರ್ಜಿ ಲಿಮಿಟೆಡ್ ರವರಿಗೆ ಗದಗ ಜಿಲ್ಲೆಯ ಮುಂಡರಗಿ ತಾಲ್ಲೂಕಿನ ಬಾಗೇವಾಡಿ ಗ್ರಾಮದಲ್ಲಿ ಹಂಚಿಕೆಯಾಗಿದ್ದ 55 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ 1.50 ಮೆ.ವ್ಯಾ. ಸಾಮರ್ಥ್ಯವನ್ನು ಮೆ: ಕೆಎಂಎಂಐ ಸ್ಟೀಲ್ ಪ್ರೈವೇಟ್ ಲಿಮಿಟೆಡ್‌ರವರಿಗೆ ವರ್ಗಾಯಿಸಿ ಆದೇಶಿಸಲಾಗಿತ್ತು. ಈ ಸಾಮರ್ಥ್ಯದ ಯೋಜನೆಯು ದಿನಾಂಕ :17.03.2008ರಲ್ಲಿ ಅನುಷ್ಠಾನಗೊಂಡಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಸರ್ಕಾರಿ ಆದೇಶದಲ್ಲಿ ಮೆ: ಕೆಎಂಎಂಐ ಸ್ಟೀಲ್ ಪ್ರೈವೇಟ್ ಲಿಮಿಟೆಡ್ ಹೆಸರನ್ನು ಮೆ : ಮಿನೇರ ಸ್ಟೀಲ್ ಆಂಡ್ ಪವರ್ ಪ್ರೈವೇಟ್ ಲಿಮಿಟೆಡ್ ಎಂದು ಬದಲಾಯಿಸಲು ಅನುಮೋದನೆ ನೀಡಲಾಗಿತ್ತು.

ಮೆ : ಮಿನೇರ ಸ್ಟೀಲ್ ಆಂಡ್ ಪವರ್ ಪ್ರೈವೇಟ್ ಲಿಮಿಟೆಡ್ ರವರು ಅನುಷ್ಠಾನಗೊಳಿಸಿರುವ ಮೇಲ್ಕಂಡ 1.50 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ:: ನಿಕತ್‌ನೂರ್ ರವರಿಗೆ ವರ್ಗಾಯಿಸುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಪತ್ರಗಳಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಇವರು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಹಾಗೂ ಸದರಿ ಪತ್ರದಲ್ಲಿ ಈ ಯೋಜನಾ ಸ್ಥಳವು ಸರ್ವೆನಂ. 77ರ 0.25 ಹೆಕ್ಟೇರ್ ಅರಣ್ಯ ಜಮೀನಾಗಿದ್ದು, ಉತ್ಪಾದನೆಯಾಗುವ ವಿದ್ಯುತ್ತನ್ನು ಸರಬರಾಜು ಮಾಡಲು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ ವಿದ್ಯುತ್ ಖರೀದಿ ಒಪ್ಪಂದವನ್ನು ಮಾಡಿಕೊಳ್ಳುವುದಾಗಿ ಅಭಿವೃದ್ಧಿದಾರರು ತಿಳಿಸಿರುತ್ತಾರೆಂದು ವರದಿ ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 134 ಎನ್‌ಸಿಇ 2012, ಬೆಂಗಳೂರು, ದಿನಾಂಕ: 29.06.2012**

ಮೆ : ಮಿನೇರ ಸ್ಟೀಲ್ ಆಂಡ್ ಪವರ್ ಪ್ರೈವೇಟ್ ಲಿಮಿಟೆಡ್ ರವರು ಗದಗ ಜಿಲ್ಲೆಯ ಮುಂಡರಗಿ ತಾಲ್ಲೂಕಿನಲ್ಲಿ ಅನುಷ್ಠಾನಗೊಳಿಸಿರುವ 1.50 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ:: ನಿಕತ್‌ನೂರ್ ರವರಿಗೆ ಈ ಕೆಳಕಂಡ ಷರತ್ತಿಗೊಳಪಟ್ಟು ವರ್ಗಾಯಿಸಲು ಅನುಮೋದನೆ ನೀಡಲಾಗಿದೆ :–

1 **ಮೆ:: ನಿಕತ್‌ನೂರ್** ಕಂಪನಿಯವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 2011 ದಿನಾಂಕ:06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.

2 **ಮೆ:: ನಿಕತ್‌ನೂರ್** ಕಂಪನಿಯವರು ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ ವಿದ್ಯುತ್ ಖರೀದಿ ಒಪ್ಪಂದವನ್ನು ಮಾಡಿಕೊಳ್ಳತಕ್ಕದ್ದು.

3 ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೌಸಲ್ಯಾ**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ,

**ಪಿ.ಆರ್. 1806**

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಕರ್ನಾಟಕದ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಶುಲ್ಕ ಮರುಪಾವತಿ ಯೋಜನೆಯ ಪರಿಷ್ಕರಿಸಿದ ಬಗ್ಗೆ

**ಯೋಜನೆ ವಿವರಗಳು:**

1. ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಶುಲ್ಕ ಮರುಪಾವತಿಯ ನಿಯಮಗಳನ್ನು 1982 ರಲ್ಲಿ ಜಾರಿಗೆ ತಂದಿದ್ದು, ತದನಂತರ ಸಾಕಷ್ಟು ಬದಲಾವಣೆಗಳು ಆಗಿರುವ ಹಿನ್ನೆಲೆಯಲ್ಲಿ ಮತ್ತು ಈ ಹಿಂದೆ ಮಂಜೂರಾತಿಯನ್ನು ಬೇರೆ ಬೇರೆ ಇಲಾಖೆಗಳ ಅಧಿಕಾರಿಗಳು ಮಾಡುತ್ತಿದ್ದು, ಶುಲ್ಕ ಮರುಪಾವತಿಯಲ್ಲಿ ಗೊಂದಲಗಳಾಗಿ ಅನೇಕ ಸಮಸ್ಯೆಗಳು ಎದುರಾಗಿವೆ. ಆದುದರಿಂದ ಈಗಿರುವ ನಿಯಮಗಳನ್ನು ಪರಿಷ್ಕರಿಸಿ ಹೊಸ ಯೋಜನೆಯನ್ನು ರೂಪಿಸಬೇಕಾಗಿದೆ ಎಂದು ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರು ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಸರ್ಕಾರ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಕಇ 201 ಬಿಎಂಎಸ್ 2011, ಬೆಂಗಳೂರು ದಿನಾಂಕ: 23.06.2012.**

**1. ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಶುಲ್ಕ ಮರುಪಾವತಿಗೆ ವಿದ್ಯಾರ್ಥಿಗಳ ಅರ್ಹತೆ:**

- ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳು ಸರ್ಕಾರದ ಆದೇಶ ಸಂಖ್ಯೆ ಸಕಇ 125 ಬಿಸಿಎ 2000 ದಿ:30–3–2002 ರ ಆದೇಶದಲ್ಲಿರುವ ಪ್ರವರ್ಗ–1, 2ಎ, 3ಎ ಮತ್ತು 3ಬಿ ಗೆ ಸೇರಿರ ತಕ್ಕದ್ದು.
- ವಿದ್ಯಾರ್ಥಿ/ತಂದೆ/ತಾಯಿ/ಪೋಷಕರ ವಾರ್ಷಿಕ ವರಮಾನ (ಶೈಕ್ಷಣಿಕ ಉದ್ದೇಶಕ್ಕಾಗಿ)

  ಅ) ಪ್ರವರ್ಗ–1ಕ್ಕೆ– ರೂ.1,00,000/–ರ ಒಳಗೆ ಇರತಕ್ಕದ್ದು.

  ಆ) ಪ್ರವರ್ಗ–2ಎ, 3ಎ,ಮತ್ತು 3ಬಿಕ್ಕೆ – ರೂ.44,500/– ರ ಒಳಗೆ ಇರತಕ್ಕದ್ದು.
- ಭಾರತದ ಪ್ರಜೆಯಾಗಿದ್ದು, ಅರ್ಜಿ ಸಲ್ಲಿಸುವ ದಿನಾಂಕಕ್ಕೆ ಕನಿಷ್ಠ 7 ವರ್ಷ ಕರ್ನಾಟಕದಲ್ಲಿ ವ್ಯಾಸಂಗ ಮಾಡಿರತಕ್ಕದ್ದು.
- ಸರ್ಕಾರಿ / ಸ್ಥಳೀಯ ಸಂಸ್ಥೆ/ ಅನುದಾನಿತ ಸಂಸ್ಥೆಗಳು / ಮಾನ್ಯತೆ ಪಡೆದ ಅನುದಾನ ರಹಿತ ಖಾಸಗಿ ಸಂಸ್ಥೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ಎಸ್‌ಎಸ್‌ಎಲ್‌ಸಿ ವಿದ್ಯಾರ್ಥಿಗಳು ಅರ್ಹರಿರುತ್ತಾರೆ.
- ಕರ್ನಾಟಕದ ಶಾಸನಬದ್ದ ವಿಶ್ವವಿದ್ಯಾಲಯಗಳ ಅಧೀನಕ್ಕೆ ಒಳಪಡುವ ಸರ್ಕಾರಿ / ಸ್ಥಳೀಯ ಸಂಸ್ಥೆ/ ಅನುದಾನಿತ ಸಂಸ್ಥೆಗಳು / ಮಾನ್ಯತೆ ಪಡೆದ ಅನುದಾನ ರಹಿತ ಖಾಸಗಿ ಸಂಸ್ಥೆಗಳಲ್ಲಿ ವ್ಯಾಸಂಗ ಮಾಡುವ ಮೆಟ್ರಿಕ್ ನಂತರದ ವಿದ್ಯಾರ್ಥಿಗಳು ಅರ್ಹರಿರುತ್ತಾರೆ.

- ವಿದ್ಯಾರ್ಥಿಗಳು ಹಿಂದಿನ ವರ್ಷದ ಪಬ್ಲಿಕ್ ಪರೀಕ್ಷೆಯಲ್ಲಿ ಎಲ್ಲಾ ವಿಷಯಗಳಲ್ಲಿ ಉತ್ತೀರ್ಣರಾಗದಿದ್ದಲ್ಲಿ ಮುಂದಿನ ವರ್ಷದಲ್ಲಿ ಶುಲ್ಕ ಮರುಪಾವತಿಗೆ ಅರ್ಹರಾಗುವುದಿಲ್ಲ. ಮುಂದಿನ ವರ್ಷದಲ್ಲಿ, ಹಿಂದಿನ ಬಾಕಿ ವಿಷಯಗಳೂ ಸೇರಿದಂತೆ ಆ ವರ್ಷದ ಎಲ್ಲಾ ವಿಷಯಗಳಲ್ಲಿ ಉತ್ತೀರ್ಣರಾಗಿದ್ದಲ್ಲಿ ಮಾತ್ರ ನಂತರದ ವರ್ಷದಲ್ಲಿ ಶುಲ್ಕ ಮರುಪಾವತಿಗೆ ಅರ್ಹರಾಗುತ್ತಾರೆ. ಆದರೆ ಆ ಕೋರ್ಸ್‌ಗಳಲ್ಲಿ ಕ್ಯಾರಿಓವರ್ ಪದ್ಧತಿ ಜಾರಿ ಇದ್ದು ಮುಂದಿನ ತರಗತಿಗೆ / ವರ್ಷಕ್ಕೆ ಪ್ರವೇಶಕ್ಕೆ ಅವಕಾಶವಿದ್ದಲ್ಲಿ ಅಂತಹವರು ಶುಲ್ಕ ಮರುಪಾವತಿಗೆ ಅರ್ಹರಿರುತ್ತಾರೆ.
- ಯಾವ ಸರ್ಕಾರಿ / ಖಾಸಗಿ ಸಂಸ್ಥೆಗಳಲ್ಲಿ, ಉಚಿತ ಶಿಕ್ಷಣ ನೀಡಲಾಗುತ್ತದೋ (ಯಾವ ಸಂಸ್ಥೆಗಳಲ್ಲಿ ವಿದ್ಯಾರ್ಥಿಗಳಿಂದ ಶುಲ್ಕವನ್ನು ವಸೂಲಿ ಮಾಡುವುದಿಲ್ಲವೊ), ಅಂತಹ ಸಂಸ್ಥೆಗಳು ಮತ್ತು ಅಲ್ಲಿನ ವಿದ್ಯಾರ್ಥಿಗಳು, ಶುಲ್ಕ ಮರುಪಾವತಿಗೆ ಅರ್ಹರಿರುವುದಿಲ್ಲ.
- ಪರೀಕ್ಷಾ ಶುಲ್ಕವನ್ನು ವರ್ಷಕ್ಕೆ ಒಮ್ಮೆ ಮಾತ್ರ ನೀಡಬೇಕು. ಅನುತ್ತೀರ್ಣರಾದ ಅಭ್ಯರ್ಥಿಗಳು ಹಾಗೂ ಸಪ್ಲಿಮೆಂಟರಿ ಪರೀಕ್ಷೆ ತೆಗೆದುಕೊಳ್ಳುವವರು ಪರೀಕ್ಷಾ ಶುಲ್ಕ ಮರುಪಾವತಿಗೆ ಅರ್ಹರಲ್ಲ.

**2. ಮೆಟ್ರಿಕ್ ನಂತರದ ಪ್ರವರ್ಗ–1, ಪ್ರವರ್ಗ 2ಎ, 3ಎ ಮತ್ತು 3ಬಿ ವಿದ್ಯಾರ್ಥಿಗಳು, ಈ ಕೆಳಗಿನ ಶುಲ್ಕಗಳ ಮರುಪಾವತಿಗೆ ಅರ್ಹರಾಗಿರುತ್ತಾರೆ.**

| ಪ್ರವರ್ಗ–1 ರ ವಿದ್ಯಾರ್ಥಿಗಳಿಗೆ | ಪ್ರವರ್ಗ–2ಎ, 3ಎ ಮತ್ತು 3ಬಿ ವಿದ್ಯಾರ್ಥಿಗಳಿಗೆ |
|---|---|
| ಪರೀಕ್ಷಾ ಶುಲ್ಕ | ಪರೀಕ್ಷಾ ಶುಲ್ಕ |
| ಬೋಧನಾ ಶುಲ್ಕ | ಬೋಧನಾ ಶುಲ್ಕ |
| ಪ್ರಯೋಗಾಲಯ ಶುಲ್ಕ (ವಿಜ್ಞಾನ, ವೈದ್ಯಕೀಯ ಮತ್ತು ತಾಂತ್ರಿಕ ಕೋರ್ಸುಗಳಿಗೆ) | ಪ್ರಯೋಗಾಲಯ ಶುಲ್ಕ (ವಿಜ್ಞಾನ, ವೈದ್ಯಕೀಯ ಮತ್ತು ತಾಂತ್ರಿಕ ಕೋರ್ಸುಗಳಿಗೆ) |
| ಕ್ರೀಡಾ ಶುಲ್ಕ | – |
| ಗ್ರಂಥಾಲಯ ಶುಲ್ಕ | – |

3. **ಎಸ್.ಎಸ್.ಎಲ್.ಸಿ. ಪರೀಕ್ಷಾಶುಲ್ಕವನ್ನು** ಎಲ್ಲಾ ಅರ್ಹ ವಿದ್ಯಾರ್ಥಿಗಳಿಗೆ ಮರುಪಾವತಿಸಲಾಗುವುದು.

4. **ಶುಲ್ಕ ವಿನಾಯಿತಿ ಮಂಜೂರಾತಿ ಪ್ರಾಧಿಕಾರ:** ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳು ಆಯಾ ಜಿಲ್ಲೆಗಳಲ್ಲಿ ಶುಲ್ಕ ಮರುಪಾವತಿ ಮಂಜೂರು ಮಾಡಲು ಅಧಿಕಾರ ಹೊಂದಿರುತ್ತಾರೆ.

5. **ಶಿಕ್ಷಣ ಸಂಸ್ಥೆಗಳು ಪ್ರವೇಶದ ಸಮಯದಲ್ಲಿ ಶುಲ್ಕ ಪಡೆಯುವ ಬಗ್ಗೆ:**

- ಎಸ್ ಎಸ್ ಎಲ್ ಸಿ ವಿದ್ಯಾರ್ಥಿಗಳಿಗೆ : 'ಮೂಲ ಜಾತಿ ಮತ್ತು ಆದಾಯದ ಪ್ರಮಾಣ ಪತ್ರಗಳನ್ನು ಸಲ್ಲಿಸಿದ ಅರ್ಹ ಹಿಂದುಳಿದ ವರ್ಗಗಳ ಯಾವುದೇ ಪ್ರವರ್ಗಗಳ ವಿದ್ಯಾರ್ಥಿಗಳಿಂದ ಪರೀಕ್ಷಾ ಶುಲ್ಕವನ್ನು ಸಂಸ್ಥೆಗಳು ಪಡೆಯತಕ್ಕದ್ದಲ್ಲ. ಇದನ್ನು ಹಿಂದುಳಿದ ವರ್ಗಗಳ ಇಲಾಖೆಯಿಂದ ಮಂಜೂರು ಮಾಡಿ ಸಂಬಂಧಿಸಿದ ಶಿಕ್ಷಣ ಸಂಸ್ಥೆಗೆ ಮರುಪಾವತಿಸಲಾಗುವುದು.
- ಮೆಟ್ರಿಕ್ ನಂತರದ ವಿದ್ಯಾರ್ಥಿಗಳಿಗೆ.
- ಕಾಲೇಜು/ಶಿಕ್ಷಣ ಸಂಸ್ಥೆಗೆ ಪ್ರವೇಶ ಪಡೆಯುವ ಸಮಯದಲ್ಲಿ, ಮೂಲ ಜಾತಿ ಮತ್ತು ಆದಾಯದ ಪ್ರಮಾಣ ಪತ್ರಗಳನ್ನು ಸಲ್ಲಿಸಿದ ಅರ್ಹ ಪ್ರವರ್ಗ–1ರ ವಿದ್ಯಾರ್ಥಿಗಳಿಂದ, ಶಿಕ್ಷಣ ಸಂಸ್ಥೆಗಳು ಶುಲ್ಕವನ್ನು ಮರುಪಾವತಿಸಬಹುದಾದ (ಕಂಡಿಕೆ 2ರಂತೆ) ಶುಲ್ಕಗಳನ್ನು ಪಡೆಯತಕ್ಕದ್ದಲ್ಲ. ಸದರಿ ಶುಲ್ಕವನ್ನು ಹಿಂದುಳಿದ ವರ್ಗಗಳ ಇಲಾಖೆಯಿಂದ ನಂತರ ಮರುಪಾವತಿಸಲಾಗುವುದು.
- ಕಾಲೇಜು/ಶಿಕ್ಷಣ ಸಂಸ್ಥೆಗೆ ಪ್ರವೇಶ ಪಡೆಯುವ ಸಮಯದಲ್ಲಿ, ಮೂಲ ಜಾತಿ ಮತ್ತು ಆದಾಯದ ಪ್ರಮಾಣ ಪತ್ರಗಳನ್ನು ಸಲ್ಲಿಸಿದ ಪ್ರವರ್ಗ–2ಎ, 3ಎ ಮತ್ತು 3ಬಿ ಗೆ ಸೇರಿದ ವಿದ್ಯಾರ್ಥಿಗಳಿಂದ, ನಿಗದಿತ ಶುಲ್ಕವನ್ನು, ಆಯಾಯ ಶಿಕ್ಷಣ ಸಂಸ್ಥೆಗಳು ಪಡೆಯಬಹುದು. ಆದರೆ, ಅರ್ಹ ವಿದ್ಯಾರ್ಥಿಗಳಿಗೆ ಅರ್ಹತೆ ಮತ್ತು ಮೆರಿಟ್ ಆಧರಿಸಿ, ಅನುದಾನದ ಲಭ್ಯತೆಗೆ ಒಳಪಟ್ಟು, ಇಲಾಖೆಯಿಂದ ಮಂಜೂರಾತಿ ನೀಡಿ ಅಂತಹ ವಿದ್ಯಾರ್ಥಿಗಳ ಬ್ಯಾಂಕ್ ಖಾತೆಗೆ ನೇರವಾಗಿ ಶುಲ್ಕ ಮರುಪಾವತಿಸಲಾಗುವುದು.

**6. ಮಂಜೂರಾದ ಮೊತ್ತವನ್ನು ಜಮಾ ಮಾಡುವ ವಿಧಾನ:**

ಅ) ಶುಲ್ಕ ಮರುಪಾವತಿ ಬಾಬ್ತು, ಪ್ರತ್ಯೇಕ ಜಂಟಿ ಖಾತೆಯನ್ನು, ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿ ಹಾಗೂ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ಇವರ ಪದನಾಮದಲ್ಲಿ ತೆರೆಯಬೇಕು.

ಆ) ಎಸ್.ಎಸ್.ಎಲ್.ಸಿ. ಎಲ್ಲಾ ಪ್ರವರ್ಗಗಳ ವಿದ್ಯಾರ್ಥಿಗಳಿಗೆ ಮಂಜೂರು ಮಾಡಿದ ಪರೀಕ್ಷಾ ಶುಲ್ಕವನ್ನು, ಆಯಾಯ ಶಿಕ್ಷಣ ಸಂಸ್ಥೆಗಳ ಬ್ಯಾಂಕ್ ಖಾತೆಗಳಿಗೆ ನೇರವಾಗಿ NEFT/RTGS ವ್ಯವಸ್ಥೆಯ ಮೂಲಕ ಜಮಾ ಮಾಡಲಾಗುವುದು. ಈ ಮೊತ್ತವನ್ನು ಆ ಶಿಕ್ಷಣ ಸಂಸ್ಥೆಯ ಮುಖ್ಯಸ್ಥರು ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಗೆ ಮರು ಜಮಾ ಮಾಡುವುದು.

ಇ) ಮೆಟ್ರಿಕ್ ನಂತರದ ಪ್ರವರ್ಗ–1 ರ ವಿದ್ಯಾರ್ಥಿಗಳಿಗೆ ಮಂಜೂರು ಮಾಡಿದ ಶುಲ್ಕಗಳನ್ನು ಆಯಾಯ ಶಿಕ್ಷಣ ಸಂಸ್ಥೆಗಳ ಬ್ಯಾಂಕ್ ಖಾತೆಗಳಿಗೆ ನೇರವಾಗಿ NEFT/RTGS ವ್ಯವಸ್ಥೆಯ ಮೂಲಕ ಜಮಾ ಮಾಡಲಾಗುವುದು.

ಈ) ಮೆಟ್ರಿಕ್ ನಂತರದ ಪ್ರವರ್ಗ–2ಎ, 3ಎ ಮತ್ತು 3ಬಿ ವಿದ್ಯಾರ್ಥಿಗಳಿಗೆ ಮಂಜೂರಾದ ಮೊತ್ತವನ್ನು ಆಯಾಯ ವಿದ್ಯಾರ್ಥಿಗಳ ಬ್ಯಾಂಕ್ ಖಾತೆಗೆ ನೇರವಾಗಿ NEFT/RTGS ವ್ಯವಸ್ಥೆಯ ಮೂಲಕ ಜಮಾ ಮಾಡಲಾಗುವುದು.

ಉ) ಶಾಲಾ–ಕಾಲೇಜುಗಳಿಗೆ / ವಿದ್ಯಾರ್ಥಿಗಳ ಬ್ಯಾಂಕ್ ಖಾತೆಗೆ, ನೇರವಾಗಿ ಹಣ ಜಮಾ ಆಗಿರುವ ವಿವರಗಳನ್ನು ಬ್ಯಾಂಕಿನಿಂದ ಪಡೆದು, ದಾಖಲೆಗಳನ್ನು ಮಹಾಲೇಖಪಾಲರ ಆಡಿಟ್‌ಗಾಗಿ ಹಾಗೂ ಜಿಲ್ಲಾ ಪಂಚಾಯತ್ ಆಡಿಟ್‌ಗಾಗಿ, ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಯ ಕಛೇರಿಯಲ್ಲಿ ನಿರ್ವಹಿಸಲಾಗುವುದು. ಈ ದಾಖಲೆಯ ಒಂದು ಪ್ರತಿಯನ್ನು ಜಿಲ್ಲಾ ಪಂಚಾಯತಿಗೆ ಕಡ್ಡಾಯವಾಗಿ ಸಲ್ಲಿಸಲಾಗುವುದು.

ಊ) ಶುಲ್ಕ ಮರುಪಾವತಿ ವಿಧಾನವನ್ನು ಸಂಪೂರ್ಣವಾಗಿ ಗಣಕೀಕರಿಸಲಾಗುವುದು.

**7. ಶುಲ್ಕ ಮರುಪಾವತಿ ದರಗಳನ್ನು ನಿಗದಿಪಡಿಸುವ ಸಮಿತಿ:**

ರಾಜ್ಯ ಸರ್ಕಾರದ ವಿವಿಧ ಇಲಾಖೆಗಳು ನಿಗದಿಪಡಿಸಿರುವ ಶುಲ್ಕಗಳ ಆಧಾರದ ಮೇಲೆ, ಪ್ರಧಾನ ಕಾರ್ಯದರ್ಶಿಗಳು, ಸಮಾಜ ಕಲ್ಯಾಣ ಇಲಾಖೆ ಇವರ ಅಧ್ಯಕ್ಷತೆಯಲ್ಲಿನ ಈ ಕೆಳಗಿನ ಸಮಿತಿಯು, ಪ್ರತಿ ವರ್ಷ ಜೂನ್ ತಿಂಗಳಲ್ಲಿ, ವಿವಿಧ ಕೋರ್ಸುಗಳಿಗೆ ಶುಲ್ಕಗಳನ್ನು ನಿಗಧಿಪಡಿಸತಕ್ಕದ್ದು.

| | | |
|---|---|---|
| ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು. ಸಮಾಜ ಕಲ್ಯಾಣ ಇಲಾಖೆ | – | ಅಧ್ಯಕ್ಷರು |
| ಸರ್ಕಾರದ ಕಾರ್ಯದರ್ಶಿಗಳು. (ವೆಚ್ಚ) ಆರ್ಥಿಕ ಇಲಾಖೆ | – | ಸದಸ್ಯರು |
| ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು. ಉನ್ನತ ಶಿಕ್ಷಣ ಇಲಾಖೆ | – | ಸದಸ್ಯರು |
| ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು. ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ | – | ಸದಸ್ಯರು |
| ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು. ವೈದ್ಯಕೀಯ ಶಿಕ್ಷಣ ಇಲಾಖೆ | – | ಸದಸ್ಯರು |
| ಎಲ್ಲಾ ವಿಶ್ವವಿದ್ಯಾನಿಲಯಗಳ ಕುಲಸಚಿವರು | – | ಸದಸ್ಯರು |
| ಆಯುಕ್ತರು/ನಿರ್ದೇಶಕರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ | – | ಸದಸ್ಯ ಕಾರ್ಯದರ್ಶಿ |

ಪ್ರತಿ ವರ್ಷ, ವಿವಿಧ ಕೋರ್ಸುಗಳಿಗೆ ಮೇಲ್ಕಂಡ ಸಮಿತಿಯು, ನಿಗದಿಪಡಿಸುವ ಶುಲ್ಕ; ಅಥವಾ ಶಿಕ್ಷಣ ಸಂಸ್ಥೆ / ವಿಶ್ವವಿದ್ಯಾಲಯಗಳು / ಮಂಡಳಿಗಳು ನಿಗದಿಪಡಿಸುವ ಶುಲ್ಕ, ಇವುಗಳಲ್ಲಿ ಯಾವುದು ಕಡಿಮೆಯೋ, ಅದರಂತೆ ಮರುಪಾವತಿಸಲಾಗುವುದು.

**8. ಪ್ರವರ್ಗವಾರು, ಕೋರ್ಸಿನ ಗುಂಪುವಾರು, ಆಯವ್ಯಯದಲ್ಲಿ ಲಭ್ಯವಿರುವ ಅನುದಾನದ ಆಧಾರದ ಮೇಲೆ ವಿದ್ಯಾರ್ಥಿಗಳಿಗೆ ಮಂಜೂರು ಮಾಡುವ ವಿಧಾನಗಳು:**

ಆದ್ಯತೆ

1. ಅ) ಮೊದಲನೇ ಆದ್ಯತೆ :– ಹಿಂದುಳಿದ ವರ್ಗದ ಎಲ್ಲ ಪ್ರವರ್ಗಗಳ ವಿದ್ಯಾರ್ಥಿಗಳಿಗೆ ಎಸ್.ಎಸ್.ಎಲ್.ಸಿ. ಪರೀಕ್ಷಾ ಶುಲ್ಕಗಳ ಮರುಪಾವತಿ.

ಆ) ಎರಡನೇ ಆದ್ಯತೆ :– ಹಿಂದುಳಿದ ವರ್ಗಗಳ ಪ್ರವರ್ಗ–1ರ ಎಲ್ಲ ವಿದ್ಯಾರ್ಥಿಗಳಿಗೆ, ನಿಗದಿತ ಶುಲ್ಕಗಳನ್ನು ಮರುಪಾವತಿ.

ಇ) ಮೂರನೇ ಆದ್ಯತೆ :– ಉಳಿದ ಮೊತ್ತವನ್ನು, ಪ್ರವರ್ಗ–2ಎ, ಪ್ರವರ್ಗ–3ಎ ಮತ್ತು ಪ್ರವರ್ಗ–3ಬಿ ಅರ್ಹ ವಿದ್ಯಾರ್ಥಿಗಳಿಗೆ ಮೆರಿಟ್ ಆಧಾರದ ಮೇಲೆ ಮಾತ್ರ ಈ ಕೆಳಗಿನ ಪ್ರಮಾಣದಂತೆ ನಿಗದಿತ ಶುಲ್ಕಗಳ ಮರುಪಾವತಿ.

| | | |
|---|---|---|
| ಪ್ರವರ್ಗ–2ಎ | – | 62 % |
| ಪ್ರವರ್ಗ–3ಎ | – | 17 % |
| ಪ್ರವರ್ಗ–3ಬಿ | – | 21 % |
| ಒಟ್ಟು | – | 100% |

- ಆ ಆರ್ಥಿಕ ವರ್ಷದಲ್ಲಿ ಒದಗಿಸುವ ಅನುದಾನಕ್ಕೆ ಅನುಗುಣವಾಗಿ ಮಂಜೂರಾತಿ ನೀಡಲಾಗುವುದು.

- ಅನುದಾನ ಲಭ್ಯವಿಲ್ಲದಿದ್ದಲ್ಲಿ, ಸ್ವೀಕರಿಸಿದ ಅರ್ಜಿಗಳಲ್ಲಿ ಮಂಜೂರಾಗದೇ ಬಾಕಿ ಉಳಿದ ಅರ್ಜಿಗಳನ್ನು ವ್ಯಪಗತ (ಲ್ಯಾಪ್ಸ್) ಎಂದು ಪರಿಗಣಿಸಲಾಗುವುದು.

**9. ಶುಲ್ಕ ಮರುಪಾವತಿಗಾಗಿ ಕೋರ್ಸುಗಳ ವಿಂಗಡಣೆ:**

| | |
|---|---|
| Group- 'A' | (i) Degree and Post Graduate level courses including M.Phil., P.h.D. and Post Doctoral research in Medicine (Allopathic, Indian and other recognized systems of medicines), Engineering, Technology, Planning, Architecture, Design, Fashion Technology, Agriculture, Veterinary & Allied Sciences, Management, Business Finance / Administration, Computer Science/Applications. |
| | (ii) Commercial Pilot License (including helicopter pilot and multiengine rating) course. |
| | (iii) Post Graduate Diploma courses in various branches of management & medicine. |
| | (iv) C.A/I.C.W.A/C.S./I.C.F.A etc., |
| | (v) M.Phil, Ph.D. and Post Doctoral Programmes (D.Litt., D.Sc, etc.)-<br>• In existing Group II courses<br>• In existing Group III courses |
| | (vi) L.L.M. |
| Group- 'B' | (i) Graduate/Post graduate courses leading to Degree, Diploma, Certificate in areas like Pharmacy (B Pharma), Nursing (B Nursing), LLB, BFS, other para-medical branches like rehabilitaton, diagnostics etc., Mass Communication, Hotel Management & Catering, Travel/Tourism/Hospitality Management, Interior Decoration, Nutrition & Dietetics, Commercial Art, Financial Services (e.g. Banking, Insurance, Taxation etc.) for which entrance qualification is minimum Sr. Secondary (10+2). |
| | (ii) Post Graduate courses not covered under Group I e.g. MA/MSc/M.com/M.Ed/M.Pharma etc. |
| Goroup- 'C' | All other courses leading to a graduate degree not covered under Group I & II e.g. BA/BSc/B.Com etc., |
| Group- 'D' | All post-matriculation level non-degree courses for which entrance qualification is High School (Class X), e.g. Senior Secondary Certificate (class XI and XII; both general and vocational stream, ITI courses, 3 year diploma courses in Polytechnics, etc., |

ಶುಲ್ಕ ಮರುಪಾವತಿಯನ್ನು ಮೇಲ್ಕಂಡ ಗುಂಪುಗಳ ಪ್ರಕಾರ ಮೆರಿಟ್ ಆಧಾರದ ಮೇಲೆ ಎಲ್ಲಾ ಕೋರ್ಸ್‌ಗಳಿಗೆ ಮಂಜೂರಾತಿ ನೀಡಲಾಗುವುದು. ಮೇಲಿನವುಗಳಲ್ಲಿ ಯಾವುದೇ ಕೋರ್ಸು ಬಿಟ್ಟು ಹೋಗಿದ್ದಲ್ಲಿ, ಅಥವಾ ಹೊಸದಾಗಿ ಸೇರ್ಪಡೆಯಾಗಬೇಕಿದ್ದಲ್ಲಿ ಅದನ್ನು ಮೇಲ್ಕಂಡ ಸಮಿತಿಯು ಪರಿಗಣಿಸುತ್ತದೆ.

**10. ತಪ್ಪು ಮಾಹಿತಿಗೆ ದಂಡ:**

ಅರ್ಜಿದಾರರು ಅಥವಾ ಶಿಕ್ಷಣ ಸಂಸ್ಥೆಯು, ತಪ್ಪು ಮಾಹಿತಿ ನೀಡಿದ್ದಲ್ಲಿ, ಅಂತಹವರ ವಿರುದ್ಧ ಈ ಕೆಳಗಿನಂತೆ ಕ್ರಮ ತೆಗೆದುಕೊಳ್ಳಲಾಗುವುದು.

ಅ) ಭಾರತೀಯ ದಂಡ ಸಂಹಿತೆಯ ಕಲಂ 177 ಮತ್ತು 181ರ ಪ್ರಕಾರ, ಶಿಕ್ಷೆಗೆ ಗುರಿಪಡಿಸಲಾಗುತ್ತದೆ.

ಆ) ಕಾನೂನಿನಂತೆ ಕ್ರಮ ಜರುಗಿಸುವುದರ ಜೊತೆಗೆ, ವಿದ್ಯಾರ್ಥಿಯು ಪಡೆದ ಒಟ್ಟು ಶುಲ್ಕವನ್ನು, ಆ ವಿದ್ಯಾರ್ಥಿಯ ತಂದೆ/ತಾಯಿ ಅಥವಾ ಪೋಷಕರಿಂದ, ಭೂ ಕಂದಾಯ ಬಾಕಿಯೆಂದು ವಸೂಲಿ ಮಾಡಲಾಗುವುದು.

ಇ) ಮಂಜೂರು ಮಾಡುವ ಅಧಿಕಾರಿಗಳು ಸಹ, ನಿಯಮಗಳ ವಿರುದ್ಧ ಮಂಜೂರು ಮಾಡಿ, ಸರ್ಕಾರದ ಬೊಕ್ಕಸಕ್ಕೆ ನಷ್ಟ ಉಂಟು ಮಾಡಿದಲ್ಲಿ, ಅಂತಹವರ ವಿರುದ್ಧ ಶಿಸ್ತಿನ ಕ್ರಮ ಜರುಗಿಸುವುದಲ್ಲದೆ ಕ್ರಿಮಿನಲ್ ಮೊಕದ್ದಮೆ ಹೂಡಲಾಗುವುದು.

**11. ಇತರೆ:**

- ಪ್ರವರ್ಗವಾರು ಜಾತಿಗಳ ಪಟ್ಟಿ ಮತ್ತು ಕುಟುಂಬದ ವಾರ್ಷಿಕ ವರಮಾನ, ಸರ್ಕಾರವು ಕಾಲ ಕಾಲಕ್ಕೆ ಹೊರಡಿಸುವ ಆದೇಶಗಳನ್ವಯ ಪರಿಷ್ಕರಣೆಗೆ ಒಳಪಟ್ಟಿರುತ್ತದೆ.

- ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ ಪ್ರತ್ಯೇಕವಾಗಿ ಕಾರ್ಯನಿರ್ವಹಿಸುತ್ತಿರುವುದರಿಂದ, ಪ್ರವರ್ಗ 2ಬಿ (ಮುಸ್ಲಿಂ) ಮತ್ತು ಇತರೆ ಅಲ್ಪಸಂಖ್ಯಾತ ಸಮುದಾಯಗಳಾದ ಕ್ರಿಶ್ಚಿಯನ್, ಜೈನ್, ಬೌದ್ಧ, ಪಾರ್ಸಿ ಮತ್ತು ಸಿಖ್ಖ್ ಸೇರಿದ ವಿದ್ಯಾರ್ಥಿಗಳಿಗೆ ಈ ಯೋಜನೆಯಡಿಯಲ್ಲಿ ಶುಲ್ಕ ಮರುಪಾವತಿ ಮಾಡಲಾಗುವುದಿಲ್ಲ. ಅಂತಹ ವಿದ್ಯಾರ್ಥಿಗಳು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯಿಂದ ಜಾರಿಗೊಳಿಸುವ ಯೋಜನೆಗಳಂತೆ ಸದರಿ ಸೌಲಭ್ಯವನ್ನು ಪಡೆಯಬಹುದು.
- ಈ ಯೋಜನೆಯ ಅನುಷ್ಠಾನಕ್ಕೆ ಅಗತ್ಯವಿರುವ ಅರ್ಜಿ ನಮೂನೆ, ಇತ್ಯಾದಿ ವಿಧಾನಗಳನ್ನು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಿಂದ ನಿರ್ಧರಿಸಲಾಗುವುದು.

12. ಶುಲ್ಕ ಮರುಪಾವತಿಗಾಗಿ ಬಾಕಿ ಇರುವ ಬಾಬ್ತು ಹೆಚ್ಚುವರಿಯಾಗಿ 2012–13 ನೇ ಸಾಲಿನಲ್ಲಿ ಸುಮಾರು ರೂ. 170.00 ಕೋಟಿಗಳನ್ನು ಆರ್ಥಿಕ ಇಲಾಖೆಯಿಂದ ಒದಗಿಸುವುದು.

13. ಈ ಸರ್ಕಾರಿ ಆದೇಶವು 2012–13 ನೇ ಸಾಲಿನಿಂದ ಜಾರಿಗೆ ಬರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಂ.ಬಾಟೆ**

**ಪಿ.ಆರ್. 1829**

ಸರ್ಕಾರದ ಅಧೀನ ಕಾರ್ಯದರ್ಶಿ–3,
ಸಮಾಜ ಕಲ್ಯಾಣ ಇಲಾಖೆ,

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ವಿದ್ಯಾರ್ಥಿಗಳ ಸಂಖ್ಯಾಬಲ ಕೊರತೆಯಿರುವ ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯಗಳನ್ನು ಮತ್ತು ಆಶ್ರಮಶಾಲೆಗಳನ್ನು, ಮೆಟ್ರಿಕ್ ನಂತರದ ಹಾಗೂ ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯಗಳನ್ನಾಗಿ ಪರಿವರ್ತಿಸಿ ಅಗತ್ಯ ಇರುವ ಕಡೆಗೆ ಸ್ಥಳಾಂತರಿಸುವ (ವರ್ಗಾಯಿಸುವ) ಬಗ್ಗೆ

**ಓದಲಾಗಿದೆ:** ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರ ಏಕ ಕಡತ ಸಂ:ಹಿಂವಕನಿ: ವನಿಶಾ–2/ಸಿಆರ್–16/2012–13 ದಿನಾಂಕ:18.06.2012

**ಪ್ರಸ್ತಾವನೆ:**

2011–12ನೇ ಸಾಲಿನಲ್ಲಿ ಸಂಖ್ಯಾಬಲದ ಕೊರತೆ ಇರುವ 14 ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯ ಹಾಗೂ ಸಮೀಪದಲ್ಲೇ ಶಾಲೆ ಮತ್ತು ವಸತಿ ನಿಲಯ ಇರುವ 41 ಆಶ್ರಮಶಾಲೆಗಳನ್ನು, ಮೆಟ್ರಿಕ್ ನಂತರದ ಹಾಗೂ ಮೆಟ್ರಿಕ್ ಪೂರ್ವ (ಬಾಲಕ/ಬಾಲಕಿಯರ) ವಿದ್ಯಾರ್ಥಿನಿಲಯಗಳನ್ನಾಗಿ ಪರಿವರ್ತಿಸಿ ಅಗತ್ಯ ಇರುವ ಬೇರೆ ಸ್ಥಳಗಳಿಗೆ ಸ್ಥಳಾಂತರಿಸುವ ಪಟ್ಟಿಯೊಂದಿಗೆ ಪ್ರಸ್ತಾವನೆಯನ್ನು, ಆಯುಕ್ತರು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರು, ಏಕ ಕಡತದಲ್ಲಿ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಸಕಇ 206 ಬಿಎಂಎಸ್ 2012, ದಿನಾಂಕ:23.06.2012**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ, ಸಂಖ್ಯಾಬಲ ಕೊರತೆ ಇರುವ ಬಾಲಕ/ಬಾಲಕಿಯರ ವಿದ್ಯಾರ್ಥಿನಿಲಯಗಳನ್ನು ಹಾಗೂ ಸಮೀಪದಲ್ಲಿ ಶಾಲೆ ಮತ್ತು ವಿದ್ಯಾರ್ಥಿ ನಿಲಯ ಇರುವ ಆಶ್ರಮಶಾಲೆಗಳನ್ನು ಅನುಬಂಧದಲ್ಲಿ ತಿಳಿಸಿರುವಂತೆ, 41 ಮೆಟ್ರಿಕ್ ನಂತರದ (ಪುರುಷ / ಮಹಿಳೆಯರ) ವಿದ್ಯಾರ್ಥಿ ನಿಲಯಗಳನ್ನಾಗಿ ಹಾಗೂ 14 ಮೆಟ್ರಿಕ್ ಪೂರ್ವ (ಬಾಲಕ/ಬಾಲಕಿಯರ) ವಿದ್ಯಾರ್ಥಿನಿಲಯಗಳನ್ನಾಗಿ ಉನ್ನತೀಕರಿಸಿ/ ಪರಿವರ್ತಿಸಿ ಮಂಜೂರಾದ ಸಿಬ್ಬಂದಿ, ಸ್ವಂತ ಕಟ್ಟಡ ಹಾಗೂ ನಿಲಯದಲ್ಲಿನ ಜಡ ಸರಕಿನೊಂದಿಗೆ ಸ್ಥಳಾಂತರಿಸಲು ಹಾಗೂ ಹೆಚ್ಚುವರಿಯಾಗಿ 1365 ಸಂಖ್ಯಾಬಲವನ್ನು ಮಂಜೂರಾತಿ ನೀಡಿ ಆದೇಶಿಸಲಾಗಿದೆ.

ಇದಕ್ಕೆ ತಗಲುವ ವೆಚ್ಚವನ್ನು ಜಿಲ್ಲಾವಲಯ ಯೋಜನೆ/ಯೋಜನೇತರ ಲೆಕ್ಕ ಶೀರ್ಷಿಕೆ 2225–00–103–0–26 ರಡಿಯಲ್ಲಿ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ ಎಂ ಭಾಟೆ**

ಸರ್ಕಾರದ ಅಧೀನ ಕಾರ್ಯದರ್ಶಿ–3
ಸಮಾಜ ಕಲ್ಯಾಣ ಇಲಾಖೆ

## ಅನುಬಂಧ-1

**ಮೆಟ್ರಿಕ್ ನಂತರ/ ಮೆಟ್ರಿಕ್ ಪೂರ್ವ ವಿದ್ಯಾರ್ಥಿ ನಿಲಯಗಳನ್ನಾಗಿ ಪರಿವರ್ತಿಸಿ ಬೇರೆ ಸ್ಥಳಗಳಿಗೆ ಸ್ಥಳಾಂತರಿಸಿರುವ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಆಶ್ರಮ ಶಾಲೆ/ಮೆಟ್ರಿಕ್ ಪೂರ್ವ ವಿದ್ಯಾರ್ಥಿ ನಿಲಯಗಳ ವಿವರ**

| ಕ್ರ ಸಂ. | ಜಿಲ್ಲೆಯ ಹೆಸರು | ಕ್ರ ಸಂ. | ಹಾಲಿ ಇರುವ ಮೆಟ್ರಿಕ್ ಪೂರ್ವ ವಿದ್ಯಾರ್ಥಿ ನಿಲಯ / ಆಶ್ರಮ ಶಾಲೆಯ ಹೆಸರು ಮತ್ತು ಸ್ಥಳ | ಪರಿವರ್ತಿಸಿ ಸ್ಥಳಾಂತರಿಸಿರುವ ಸ್ಥಳ | ಜಿಲ್ಲೆ | ಮಂಜೂರಾತಿ ಸಂಖ್ಯೆ |
|---|---|---|---|---|---|---|
| **1** | **2** | **3** | **4** | **5** | 6 | **7** |
| 1 | ಬೆಂಗಳೂರು ನಗರ | 1 | ಆಶ್ರಮಶಾಲೆ, ದೇವಸಂದ್ರ, ಬೆಂಗಳೂರು ಪೂರ್ವ ತಾಲ್ಲೂಕು | ಯಲಹಂಕ ಮೆಟ್ರಿಕ್ ನಂತರದ **ಮಹಿಳೆ**ಯರ ನಿಲಯವನ್ನಾಗಿ | ಬೆಂಗಳೂರು ನಗರ | 100 |
| 2 | ಬೆಂಗಳೂರು (ಗ್ರಾ) | 2 | ಆಶ್ರಮಶಾಲೆ, ದೊಡ್ಡಬಳ್ಳಾಪುರ ಟೌನ್ | ದೇವನಹಳ್ಳಿಯಲ್ಲಿ ಮೆಟ್ರಿಕ್ ನಂತರದ **ಮಹಿಳೆ**ಯರ ನಿಲಯವನ್ನಾಗಿ | ಬೆಂಗಳೂರು ಗ್ರಾ ಜಿಲ್ಲೆ | 50 |
| 3 | ರಾಮನಗರ | 3 | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ, ಚಿಕ್ಕಮುದವಾಡಿ, ಕನಕಪುರ ತಾಲ್ಲೂಕು | ಮೆಟ್ರಿಕ್ ನಂತರ ಪುರುಷರ ವೃತ್ತಿಪರ ವಿದ್ಯಾರ್ಥಿ ನಿಲಯವನ್ನಾಗಿ ರಾಮನಗರ ಜಿಲ್ಲೆಯ ಚನ್ನಪಟ್ಟಣ ಟೌನ್‌ಗೆ ಪರಿವರ್ತಿಸಿ ವರ್ಗಾಯಿಸಲಾಗಿದೆ. | ರಾಮನಗರ | 50 |
| | | 4 | ಮೆಟ್ರಿಕ್ ಪೂರ್ವ ಬಾಲಕಿಯರ ವಿದ್ಯಾರ್ಥಿ ನಿಲಯ,ಮಾಗಡಿ ಟೌನ್ | ಮೆಟ್ರಿಕ್ ನಂತರ ಪುರುಷರ ವಿದ್ಯಾರ್ಥಿ ನಿಲಯವನ್ನಾಗಿ ಹಿರಿಯೂರು, ಚಿತ್ರದುರ್ಗ ಜಿಲ್ಲೆ ಇಲ್ಲಿಗೆ ಪರಿವರ್ತಿಸಿ ವರ್ಗಾಯಿಸಲಾಗಿದೆ. | **ಚಿತ್ರದುರ್ಗ** | 100 |
| 4 | ತುಮಕೂರು | 5 | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ, ಉರ್ಡಿಗೆರೆ, ತುಮಕೂರು ತಾಲ್ಲೂಕು | ಮೆಟ್ರಿಕ್ ನಂತರ ಪುರುಷರ ವಿದ್ಯಾರ್ಥಿ ನಿಲಯವಾಗಿ ತುಮಕೂರು ಟೌನ್ ಇಲ್ಲಿಗೆ ಪರಿವರ್ತಿಸಿ ವರ್ಗಾಯಿಸಲಾಗಿದೆ. | ತುಮಕೂರು | 50 |
| 5 | ಚಿಕ್ಕಬಳ್ಳಾಪುರ | 6 | ಆಶ್ರಮಶಾಲೆ, ಕಡಶೀಗೇನಹಳ್ಳಿ, ಚಿಕ್ಕಬಳ್ಳಾಪುರ ತಾಲ್ಲೂಕು | ಚಿಕ್ಕಬಳ್ಳಾಪುರ ಜಿಲ್ಲಾ ಕೇಂದ್ರ ಸ್ಥಾನದಲ್ಲಿ ಮೆಟ್ರಿಕ್ ನಂತರದ ಪುರುಷರ ವಿದ್ಯಾರ್ಥಿನಿಲಯವನ್ನಾಗಿ | ಚಿಕ್ಕಬಳ್ಳಾಪುರ | 50 |
| 6 | ಕೋಲಾರ | 7 | ಆಶ್ರಮಶಾಲೆ, ದೊಂಬರಹಳ್ಳಿ, ಶ್ರೀನಿವಾಸ ಪುರ ತಾಲ್ಲೂಕು | ಶ್ರೀನಿವಾಸಪುರದಲ್ಲಿ ಮೆಟ್ರಿಕ್ ನಂತರದ ಪುರುಷರ ವಿದ್ಯಾರ್ಥಿ ನಿಲಯವನ್ನಾಗಿ | ಕೋಲಾರ | 50 |
| | | 8 | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ, ಶ್ರೀನಿವಾಸಪುರ ಟೌನ್ | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ, ಶ್ರೀನಿವಾಸಪುರ ಟೌನ್ ಇದನ್ನು ಮೆಟ್ರಿಕ್ ನಂತರ **ಮಹಿಳೆ**ಯರ ವಿದ್ಯಾರ್ಥಿ ನಿಲಯವಾಗಿ ಶ್ರೀನಿವಾಸಪುರ ಟೌನ್‌ಗೆ ಪರಿವರ್ತಿಸಲಾಗಿದೆ. | ಕೋಲಾರ | 50 |
| | | 9 | ಆಶ್ರಮಶಾಲೆ, ಟಿ.ನಡಂಪಲ್ಲಿ, ಮುಳಬಾಗಿಲು ತಾಲ್ಲೂಕು | ಮುಳಬಾಗಿಲು ತಾಲೂಕು ಕೇಂದ್ರದಲ್ಲಿ ಮೆಟ್ರಿಕ್ ನಂತರದ ಪುರುಷರ ವಿದ್ಯಾರ್ಥಿ ನಿಲಯವನ್ನಾಗಿ | ಕೋಲಾರ | 50 |

| ಕ್ರ ಸಂ. | ಜಿಲ್ಲೆಯ ಹೆಸರು | ಕ್ರ ಸಂ. | ಹಾಲಿ ಇರುವ ಮೆಟ್ರಿಕ್ ಪೂರ್ವ ವಿದ್ಯಾರ್ಥಿ ನಿಲಯ / ಆಶ್ರಮ ಶಾಲೆಯ ಹೆಸರು ಮತ್ತು ಸ್ಥಳ | ಪರಿವರ್ತಿಸಿ ಸ್ಥಳಾಂತರಿಸಿರುವ ಸ್ಥಳ | ಜಿಲ್ಲೆ | ಮಂಜೂರಾತಿ ಸಂಖ್ಯೆ |
|---|---|---|---|---|---|---|
| 1 | 2 | 3 | 4 | 5 | 6 | 7 |
| 6 | ಕೋಲಾರ | 10 | ಆಶ್ರಮಶಾಲೆ,ನಾಗೇನಹಳ್ಳಿ, ಮುಳಬಾಗಿಲು ತಾಲ್ಲೂಕು | ಮುಳಬಾಗಿಲು ತಾಲೂಕಿನ ತಾಯಲೂರುನಲ್ಲಿ ಮೆಟ್ರಿಕ್ ಪೂರ್ವ ಬಾಲಕರ ವಸತಿನಿಲಯವನ್ನಾಗಿ | ಕೋಲಾರ | 50 |
| | | 11 | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ, ಕುಡಿಯನೂರು, ಮಾಲೂರು ತಾ: | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ, ಕುಡಿಯನೂರು ಇದನ್ನು ಮೆಟ್ರಿಕ್ ನಂತರ ಪುರುಷರ ವಿದ್ಯಾರ್ಥಿ ನಿಲಯ, ಮಾಲೂರು ಟೌನ್ ಅಗಿ | ಕೋಲಾರ | 50 |
| | | 12 | ಮೆಟ್ರಿಕ್ ಪೂರ್ವ ಬಾಲಕಿಯರ ವಿದ್ಯಾರ್ಥಿ ನಿಲಯ, ಬಂಗಾರಪೇಟೆ ಟೌನ್ | ಮೆಟ್ರಿಕ್ ನಂತರ ಪುರುಷರ ವಿದ್ಯಾರ್ಥಿ ನಿಲಯವಾಗಿ ಬಂಗಾರಪೇಟೆ ಟೌನ್‌ಗೆ | ಕೋಲಾರ | 100 |
| 7 | ಚಿತ್ರದುರ್ಗ | 13 | ಆಶ್ರಮಶಾಲೆ, ಚಳ್ಳಕೆರೆ ಟೌನ್ | ಚಳ್ಳಕೆರೆ ಟೌನ್‌ಗೆ ಮೆ.ನಂ ಪುರುಷರ ವಿದ್ಯಾರ್ಥಿ ನಿಲಯವನ್ನಾಗಿ | ಚಿತ್ರದುರ್ಗ | 100 |
| 8 | ಶಿವಮೊಗ್ಗ | 14 | ಆಶ್ರಮಶಾಲೆ, ಹೊಸೂರು, ಶಿಕಾರಿ ಪುರ ತಾಲ್ಲೂಕು | ಸೊರಬ ತಾಲ್ಲೂಕು ಆನವಟ್ಟಿ ಟೌನ್‌ಗೆ ಮೆ.ನಂ ಪುರುಷರ ವಿದ್ಯಾರ್ಥಿ ನಿಲಯವನ್ನಾಗಿ | ಶಿವಮೊಗ್ಗ | 100 |
| | | 15 | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ, ಆಶ್ರಯ ಕಾಲೋನಿ, ಭದ್ರಾವತಿ ಟೌನ್ | ಮೆಟ್ರಿಕ್ ನಂತರ ಪುರುಷರ ವಿದ್ಯಾರ್ಥಿ ನಿಲಯ, ಭದ್ರಾವತಿ ಟೌನ್‌ಗೆ ಪರಿವರ್ತಿಸಿ ವರ್ಗಾಯಿಸಲಾಗಿದೆ.. | ಶಿವಮೊಗ್ಗ | 100 |
| 9 | ಬಿಜಾಪುರ | 16 | ಆಶ್ರಮಶಾಲೆ, ಶಿವಣಗಿ, ಬಿಜಾಪುರ ತಾಲ್ಲೂಕು | ಈ ಆಶ್ರಮ ಶಾಲೆಯನ್ನು ಸಿಂದಗಿ ಪಟ್ಟಣದಲ್ಲಿ ಮೆ.ನಂ **ಮಹಿಳೆಯರ** ನಿಲಯವನ್ನಾಗಿ | ಬಿಜಾಪುರ | 100 |
| | | 17 | ಆಶ್ರಮಶಾಲೆ, ನಿಡಗುಂದಿ, ಬಸವನಬಾಗೇವಾಡಿ ತಾಲ್ಲೂಕು | ಈ ಆಶ್ರಮ ಶಾಲೆಯನ್ನು ಬಸವನಬಾಗೇವಾಡಿ ಪಟ್ಟಣದಲ್ಲಿ ಮೆ.ನಂ ಪುರುಷರ ವಿದ್ಯಾರ್ಥಿ ನಿಲಯವನ್ನಾಗಿ | ಬಿಜಾಪುರ | 50 |
| 10 | ಬಾಗಲಕೋಟೆ | 18 | ಆಶ್ರಮಶಾಲೆ, ಜಮಖಂಡಿ ಟೌನ್ | ಬೀಳಗಿ ಪಟ್ಟಣದಲ್ಲಿ ಮೆಟ್ರಿಕ್ ನಂತರ ಪುರುಷರ ವಿದ್ಯಾರ್ಥಿ ನಿಲಯವನ್ನಾಗಿ | ಬಾಗಲಕೋಟೆ | 100 |
| | | 19 | ಆಶ್ರಮಶಾಲೆ, ಹುನಗುಂದ ಟೌನ್ | ಹುನಗುಂದದಲ್ಲಿ ಮೆಟ್ರಿಕ್ ನಂತರ ಪುರುಷರ ವಿ ನಿಲಯವನ್ನಾಗಿ | ಬಾಗಲಕೋಟೆ | 100 |
| | | 20 | ಆಶ್ರಮಶಾಲೆ, ಕಾಕನೂರ, ಬಾದಾಮಿ ತಾಲ್ಲೂಕು | ಕಾಕನೂರಿನಲ್ಲಿ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯವನ್ನಾಗಿ | ಬಾಗಲಕೋಟೆ | 50 |

| ಕ್ರ ಸಂ. | ಜಿಲ್ಲೆಯ ಹೆಸರು | ಕ್ರ ಸಂ. | ಹಾಲಿ ಇರುವ ಮೆಟ್ರಿಕ್ ಪೂರ್ವ ವಿದ್ಯಾರ್ಥಿ ನಿಲಯ / ಆಶ್ರಮ ಶಾಲೆಯ ಹೆಸರು ಮತ್ತು ಸ್ಥಳ | ಪರಿವರ್ತಿಸಿ ಸ್ಥಳಾಂತರಿಸಿರುವ ಸ್ಥಳ | ಜಿಲ್ಲೆ | ಮಂಜೂರಾತಿ ಸಂಖ್ಯೆ |
|---|---|---|---|---|---|---|
| **1** | **2** | **3** | **4** | **5** | 6 | **7** |
| | | 21 | ಆಶ್ರಮಶಾಲೆ, ಕೆರೂರು, ಬಾದಾಮಿ ತಾಲ್ಲೂಕು | ಹುನಗುಂದ ತಾಲ್ಲೂಕಿನ ವಡಗೇರಿಯಲ್ಲಿ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯವನ್ನಾಗಿ | ಬಾಗಲಕೋಟೆ | 50 |
| | | 22 | ಆಶ್ರಮಶಾಲೆ, ಬಾದಾಮಿ ಟೌನ್ | ಬಾದಾಮಿಯಲ್ಲಿ ಮೆಟ್ರಿಕ್ ನಂತರದ ಪುರುಷರ ವಿದ್ಯಾರ್ಥಿನಿಲಯವನ್ನಾಗಿ | ಬಾಗಲಕೋಟೆ | 100 |
| 11 | ಬೆಳಗಾವಿ | 23 | ಆಶ್ರಮಶಾಲೆ, ಮುರುಗೋಡ , ಸವದತ್ತಿ ತಾಲ್ಲೂಕು | ಮುರುಗೋಡದಲ್ಲಿ ಮೆಟ್ರಿಕ್ ನಂತರದ ಪುರುಷರ ವಿದ್ಯಾರ್ಥಿನಿಲಯವನ್ನಾಗಿ | ಬೆಳಗಾಂ | 50 |
| | | 24 | ಆಶ್ರಮಶಾಲೆ, ಕಡಬಿ, ಸವದತ್ತಿ ತಾಲ್ಲೂಕು | ಸವದತ್ತಿಯಲ್ಲಿ ಮೆಟ್ರಿಕ್ ನಂತರದ ಪುರುಷರ ವಿದ್ಯಾರ್ಥಿನಿಲಯವನ್ನಾಗಿ | ಬೆಳಗಾಂ | 50 |
| | | 25 | ಆಶ್ರಮಶಾಲೆ, ಬೆನಕನಹಳ್ಳಿ, ಬೆಳಗಾಂ ತಾಲ್ಲೂಕು | ಚಿಕ್ಕೋಡಿ ತಾಲೂಕು ಮಜಲಹಟ್ಟಿಯಲ್ಲಿ ಮೆಟ್ರಿಕ್ ನಂತರದ **ಮಹಿಳೆ**ಯರ ವಿದ್ಯಾರ್ಥಿನಿಲಯವನ್ನಾಗಿ | ಬೆಳಗಾಂ | 100 |
| | | 26 | ಆಶ್ರಮಶಾಲೆ, ಬೈಲಹೊಂಗಲ ಟೌನ್ | ಬೈಲಹೊಂಗಲದಲ್ಲಿ ಮೆಟ್ರಿಕ್ ನಂತರದ ಪುರುಷರ ವಿದ್ಯಾರ್ಥಿನಿಲಯವನ್ನಾಗಿ | ಬೆಳಗಾಂ | 100 |
| | | 27 | ಮೆಟ್ರಿಕ್ ಪೂರ್ವ ಬಾಲಕಿಯರ ವಿದ್ಯಾರ್ಥಿ ನಿಲಯ, ಮಚ್ಚೆ, ಬೆಳಗಾಂ ತಾಲ್ಲೂಕು | ಮೆಟ್ರಿಕ್ ನಂತರ **ಮಹಿಳೆ**ಯರ ವಿದ್ಯಾರ್ಥಿ ನಿಲಯ, ಬೆಳಗಾಂ ಟೌನ್‌ಗೆ | ಬೆಳಗಾಂ | 100 |
| 12 | ಧಾರವಾಡ | 28 | ಎನ್.ಟಿ. ಆಶ್ರಮ ಶಾಲೆ ನವಲಗುಂದ ಟೌನ್ | ನವಲಗುಂದದಲ್ಲಿ ಮೆಟ್ರಿಕ್ ನಂತರ **ಮಹಿಳೆ**ಯರ ವಿದ್ಯಾರ್ಥಿ ನಿಲಯವನ್ನಾಗಿ | ಧಾರವಾಢ | 50 |
| | | 29 | ಆಶ್ರಮಶಾಲೆ, ಎ.ಪಿ.ಎಂ.ಸಿ. ಬಳಿ ಹುಬ್ಬಳ್ಳಿ | ಹುಬ್ಬಳ್ಳಿ ಎ.ಪಿ.ಎಂ.ಸಿ ಬಳಿ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯವನ್ನಾಗಿ | ಧಾರವಾಢ | 50 |
| | | 30 | ಆಶ್ರಮ ಶಾಲೆ, ಉಣಕಲ್, ಹುಬ್ಬಳ್ಳಿ ತಾಲ್ಲೂಕು | ಉಣಕಲ್‌ನಲ್ಲಿ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯವನ್ನಾಗಿ | ಧಾರವಾಢ | 50 |
| 13 | ಉತ್ತರ ಕನ್ನಡ | 31 | ಆಶ್ರಮಶಾಲೆ, ಮುಂಡಗೋಡ ಟೌನ್ | ಮುಂಡಗೋಡದಲ್ಲಿ ಮೆಟ್ರಿಕ್ ನಂತರ **ಮಹಿಳೆ**ಯರ ವಿದ್ಯಾರ್ಥಿ ನಿಲಯವನ್ನಾಗಿ | ಉತ್ತರ ಕನ್ನಡ | 50 |

| ಕ್ರ ಸಂ. | ಜಿಲ್ಲೆಯ ಹೆಸರು | ಕ್ರ ಸಂ. | ಹಾಲಿ ಇರುವ ಮೆಟ್ರಿಕ್ ಪೂರ್ವ ವಿದ್ಯಾರ್ಥಿ ನಿಲಯ / ಆಶ್ರಮ ಶಾಲೆಯ ಹೆಸರು ಮತ್ತು ಸ್ಥಳ | ಪರಿವರ್ತಿಸಿ ಸ್ಥಳಾಂತರಿಸಿರುವ ಸ್ಥಳ | ಜಿಲ್ಲೆ | ಮಂಜೂರಾತಿ ಸಂಖ್ಯೆ |
|---|---|---|---|---|---|---|
| 1 | 2 | 3 | 4 | 5 | 6 | 7 |
| | | 32 | ಆಶ್ರಮಶಾಲೆ, ಅಂಕೋಲಾ ಟೌನ್ | ಅಂಕೋಲ ತಾಲ್ಲೂಕಿನ ಹುಲಗ ಗ್ರಾಮಕ್ಕೆ ಮೆಟ್ರಿಕ್ ನಂತರ ಪುರುಷರ ವಿದ್ಯಾರ್ಥಿ ನಿಲಯವನ್ನಾಗಿ | ಉತ್ತರ ಕನ್ನಡ | 50 |
| | | 33 | ಆಶ್ರಮಶಾಲೆ,ಸಾಂಬ್ರಾಣಿ, ಹಳಿಯಾಳ ತಾಲ್ಲೂಕು | ಸಾಂಬ್ರಾಣಿಯಲ್ಲಿ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯವನ್ನಾಗಿ | ಉತ್ತರ ಕನ್ನಡ | 50 |
| | | 34 | ಆಶ್ರಮಶಾಲೆ, ಜತಗಾ ಗೌಳಿವಾಡ, ಹಳಿಯಾಳ ತಾಲ್ಲೂಕು | ಸಿರಸಿ ತಾಲ್ಲೂಕು ಮಂಡಲ ದಲ್ಲಿ ಮೆ.ಪೂರ್ವ ಬಾಲಕಿಯರ ವಿದ್ಯಾರ್ಥಿ ನಿಲಯವನ್ನಾಗಿ | ಉತ್ತರ ಕನ್ನಡ | 50 |
| | | 35 | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ, ಹಿರೇಗುತ್ತಿ , ಕುಮಟಾ ತಾಲ್ಲೂಕು | ಮೆಟ್ರಿಕ್ ನಂತರ ಪುರುಷರ ವಿದ್ಯಾರ್ಥಿ ನಿಲಯ, ಸಿದ್ದಾಪುರ ಟೌನ್‌ಗೆ ಪರಿವರ್ತಿಸಿ ವರ್ಗಾಯಿಸಲಾಗಿದೆ. | ಉತ್ತರ ಕನ್ನಡ | 50 |
| 14 | ಗುಲ್ಬರ್ಗಾ | 36 | ಆಶ್ರಮಶಾಲೆ, ನೆಲೋಗಿ. ಜೀವರ್ಗಿ ತಾಲ್ಲೂಕು | ಯಾದಗಿರಿ ಜಿಲ್ಲೆಯ ಶಹಪುರದಲ್ಲಿ ಮೆಟ್ರಿಕ್ ನಂತರ ಪುರುಷರ ವಿದ್ಯಾರ್ಥಿ ನಿಲಯವನ್ನಾಗಿ | **ಯಾದಗಿರಿ** | 100 |
| | | 37 | ಆಶ್ರಮಶಾಲೆ, ಸಾವಳಗಿ (ಬಿ), ಗುಲ್ಬರ್ಗಾ ತಾಲ್ಲೂಕು | ಬಾಗಲಕೋಟೆ ಜಿಲ್ಲೆಯ ಮುಧೋಳ ತಾ:ನ ಇಂಗಳಗಿಯಲ್ಲಿ ಮೆ.ಪೂ ಬಾಲಕರ ವಿದ್ಯಾರ್ಥಿ ನಿಲಯವನ್ನಾಗಿ | ಬಾಗಲಕೋಟೆ | 50 |
| 15 | ಬಳ್ಳಾರಿ | 38 | ಆಶ್ರಮಶಾಲೆ, ತೆಕ್ಕಲಕೋಟೆ, ಸಿರಗುಪ್ಪ ತಾಲ್ಲೂಕು | ತೆಕ್ಕಲಕೋಟೆಯಲ್ಲಿ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯವನ್ನಾಗಿ | ಬಳ್ಳಾರಿ | 50 |
| 16 | ರಾಯಚೂರು | 39 | ಆಶ್ರಮಶಾಲೆ, ಮಾನ್ವಿ ಟೌನ್ | ಮಾನ್ವಿಯಲ್ಲಿ ಮೆಟ್ರಿಕ್ ನಂತರ ಪುರುಷರ ವಿದ್ಯಾರ್ಥಿ ನಿಲಯವನ್ನಾಗಿ | ರಾಯಚೂರು | 50 |
| | | 40 | ಆಶ್ರಮಶಾಲೆ, ದೇವದುರ್ಗ ಟೌನ್ | ದೇವದುರ್ಗದಲ್ಲಿ ಮೆಟ್ರಿಕ್ ನಂತರ ಪುರುಷರ ವಿದ್ಯಾರ್ಥಿ ನಿಲಯವನ್ನಾಗಿ | ರಾಯಚೂರು | 50 |
| 17 | ಯಾದಗಿರಿ | 41 | ಆಶ್ರಮಶಾಲೆ, ಯಾದಗಿರಿ ಟೌನ್ | ದಾವಣಗೆರೆ ಜಿಲ್ಲೆಯ ಜಗಳೂರಿನಲ್ಲಿ ಮೆಟ್ರಿಕ್ ನಂತರ ಪುರುಷರ ವಿದ್ಯಾರ್ಥಿ ನಿಲಯವನ್ನಾಗಿ | **ದಾವಣಗೆರೆ** | 100 |
| | | 42 | ಆಶ್ರಮಶಾಲೆ, ಗಾಜರಕೋಟ, ಯಾದಗಿರಿ ತಾಲ್ಲೂಕು | ಸುರಪುರ ತಾಲ್ಲೂಕಿನ ಹುಣಸಗಿ ಪಟ್ಟಣದಲ್ಲಿ ಮೆಟ್ರಿಕ್ ನಂತರ ಪುರುಷರ ವಿದ್ಯಾರ್ಥಿ ನಿಲಯವನ್ನಾಗಿ | ಯಾದಗಿರಿ | 50 |
| 18 | ಕೊಪ್ಪಳ | 43 | ಆಶ್ರಮಶಾಲೆ, ಕುಷ್ಠಗಿ ಟೌನ್ | ಕುಷ್ಠಗಿ ಪಟ್ಟಣದಲ್ಲಿ ಮೆಟ್ರಿಕ್ ನಂತರದ ಪುರುಷರ ವಿದ್ಯಾರ್ಥಿನಿಲಯವನ್ನಾಗಿ | ಕೊಪ್ಪಳ | 100 |
| 19 | ಬೀದರ್ | 44 | ಆಶ್ರಮಶಾಲೆ, ನೌಬಾದ್, ಬೀದರ್ ತಾಲ್ಲೂಕು | ಬೆಳಗಾಂ ಜಿಲ್ಲೆಯ ಅಥಣಿ ತಾಲ್ಲೂಕು ಬಾಡಗಿಯಲ್ಲಿ ಮೆಟ್ರಿಕ್ ಪೂರ್ವ ಬಾಲಕಿಯರ ವಿದ್ಯಾರ್ಥಿನಿಲಯವನ್ನಾಗಿ | **ಬೆಳಗಾಂ** | 50 |

| ಕ್ರ ಸಂ. | ಜಿಲ್ಲೆಯ ಹೆಸರು | ಕ್ರ ಸಂ. | ಹಾಲಿ ಇರುವ ಮೆಟ್ರಿಕ್ ಪೂರ್ವ ವಿದ್ಯಾರ್ಥಿ ನಿಲಯ / ಆಶ್ರಮ ಶಾಲೆಯ ಹೆಸರು ಮತ್ತು ಸ್ಥಳ | ಪರಿವರ್ತಿಸಿ ಸ್ಥಳಾಂತರಿಸಿರುವ ಸ್ಥಳ | ಜಿಲ್ಲೆ | ಮಂಜೂರಾತಿ ಸಂಖ್ಯೆ |
|---|---|---|---|---|---|---|
| **1** | **2** | **3** | **4** | **5** | 6 | **7** |
| 20 | ದಕ್ಷಿಣ ಕನ್ನಡ | 45 | ಆಶ್ರಮಶಾಲೆ, ಬಜಪೆ, ಮಂಗಳೂರು ತಾಲ್ಲೂಕು | ಬಜಪೆಯಲ್ಲಿ ಮೆಟ್ರಿಕ್ ನಂತರ **ಮಹಿಳೆ**ಯರ ವಿದ್ಯಾರ್ಥಿ ನಿಲಯವನ್ನಾಗಿ | ದಕ್ಷಿಣ ಕನ್ನಡ | 100 |
| | | 46 | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ, ಬಂಗಾಡಿ, ಬೆಳ್ತಂಗಡಿ ತಾಲ್ಲೂಕು | ಮೆಟ್ರಿಕ್ ನಂತರ ಪುರುಷರ ವಿದ್ಯಾರ್ಥಿ ನಿಲಯ, ಮಡಂತ್ಯಾರು, ಬೆಳ್ತಂಗಡಿ ತಾಲ್ಲೂಕು ಇಲ್ಲಿಗೆ ಪರಿವರ್ತಿಸಿ ವರ್ಗಾಯಿಸಲಾಗಿದೆ. | ದಕ್ಷಿಣ ಕನ್ನಡ | 100 |
| 21 | ಹಾಸನ | 47 | ಆಶ್ರಮಶಾಲೆ, ಮುರುಂಡಿಸಿದ್ದರಹಟ್ಟಿ, ಅರಸೀಕೆರೆ ತಾಲ್ಲೂಕು | ಚನ್ನರಾಯಪಟ್ಟಣದಲ್ಲಿ ಟೌನ್‌ಗೆ ಮೆಟ್ರಿಕ್ ನಂತರ ಪುರುಷರ ವಿದ್ಯಾರ್ಥಿ ನಿಲಯವನ್ನಾಗಿ | ಹಾಸನ | 100 |
| 22 | ಮೈಸೂರು | 48 | ಆಶ್ರಮಶಾಲೆ, ಹರಗನಪುರ, ನಂಜನಗೂಡು ತಾಲ್ಲೂಕು | ಪಿರಿಯಾಪಟ್ಟಣದಲ್ಲಿ ಟೌನ್‌ಗೆ ಮೆಟ್ರಿಕ್ ನಂತರ ಪುರುಷರ ವಿದ್ಯಾರ್ಥಿ ನಿಲಯವನ್ನಾಗಿ | ಮೈಸೂರು | 100 |
| | | 49 | ಆಶ್ರಮಶಾಲೆ, ಅಂಜನಾಪುರ, ನಂಜನಗೂಡು ತಾಲ್ಲೂಕು | ಚಿಕ್ಕಮಗಳೂರು ಜಿಲ್ಲೆಯ ಮಲ್ಲೇನಹಳ್ಳಿ ಗ್ರಾಮಕ್ಕೆ ಮೆ.ಪೂರ್ವ ಬಾಲಕರ ವಿದ್ಯಾರ್ಥಿ ನಿಲಯವನ್ನಾಗಿ | **ಚಿಕ್ಕಮಗಳೂರು** | 50 |
| | | 50 | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ, ಉದ್ಬೂರು, ಮೈಸೂರು ತಾಲ್ಲೂಕು | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ, ಮೈಸೂರು ನಗರ ಇಲ್ಲಿಗೆ ವರ್ಗಾಯಿಸಲಾಗಿದೆ. | ಮೈಸೂರು | 50 |
| 23 | ಚಿಕ್ಕಮಗಳೂರು | 51 | ಆಶ್ರಮಶಾಲೆ, ತಂಗಲಿ, ಕಡೂರು ತಾಲ್ಲೂಕು | ಕಡೂರು ತಾಲೂಕಿನ ನಿಡಘಟ್ಟದಲ್ಲಿ ಮೆಟ್ರಿಕ್ ಪೂರ್ವ ಬಾಲಕಿಯರ ವಿದ್ಯಾರ್ಥಿನಿಲಯವನ್ನಾಗಿ | ಚಿಕ್ಕಮಗಳೂರು | 50 |
| | | 52 | ಆಶ್ರಮಶಾಲೆ, ಬೋರೆಕಾವಲ್, ಕಡೂರು ತಾಲ್ಲೂಕು | ಬೋರೇಕಾವಲ್‌ನಲ್ಲಿ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯವನ್ನಾಗಿ | ಚಿಕ್ಕಮಗಳೂರು | 50 |
| 24 | ಕೊಡಗು | 53 | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ, ಭಾಗಮಂಡಲ, ಮಡಿಕೇರಿ ತಾಲ್ಲೂಕು | ಮೆಟ್ರಿಕ್ ನಂತರ ಪುರುಷರ ವಿದ್ಯಾರ್ಥಿ ನಿಲಯ, ಭಾಗಮಂಡಲ ಇಲ್ಲಿಗೆ | ಕೊಡಗು | 50 |
| | | 54 | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ, ವಿರಾಜಪೇಟೆ ಟೌನ್ | ಮೆಟ್ರಿಕ್ ನಂತರ ಪುರುಷರ ವಿದ್ಯಾರ್ಥಿ ನಿಲಯ, ವಿರಾಜಪೇಟೆ ಇಲ್ಲಿಗೆ | ಕೊಡಗು | 100 |
| 25 | ಉಡುಪಿ | 55 | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ, ಪಳ್ಳಿ, ಕಾರ್ಕಳ ತಾಲ್ಲೂಕು | ಮೆಟ್ರಿಕ್ ನಂತರ **ಮಹಿಳೆ**ಯರ ವಿದ್ಯಾರ್ಥಿ ನಿಲಯ, ಹೆಬ್ರಿ, ಕಾರ್ಕಳ ತಾಲ್ಲೂಕು ಇಲ್ಲಿಗೆ | ಉಡುಪಿ | 100 |
| | | | | **ಒಟ್ಟು** | | **3850** |

**ಎಂ.ಎಂ.ಭಾಟೆ**
ಸರ್ಕಾರದ ಅಧೀನ ಕಾರ್ಯದರ್ಶಿಗಳು–3
ಸಮಾಜ ಕಲ್ಯಾಣ ಇಲಾಖೆ.

**ಪಿ.ಆರ್. 1830**

## ಇಂಧನ ಸಚಿವಾಲಯ

**ವಿಷಯ:** ಮೆ: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಂಚಿಕೆಯಾಗಿರುವ 200 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ 0.8 ಮೆ.ವ್ಯಾ ಸಾಮರ್ಥ್ಯವನ್ನು ಮೆ: ಸ್ವಸ್ತಿಕ್ ಕನ್ಸ್ಟ್ರಕ್ಷನ್ ಸರ್ವೀಸಸ್ ರವರಿಗೆ ವರ್ಗಾವಣೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 42 ಎನ್‌ಸಿಇ 2006 ದಿನಾಂಕ: 20.4.2006.

2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 462 ಎನ್‌ಸಿಇ 2006 ದಿನಾಂಕ: 19.12.2006.

3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 322 ಎನ್‌ಸಿಇ 2011 ದಿನಾಂಕ: 28.10.2011.

4) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/SCS-0.8 MW (VWILLP-200 MW)/2012/1762 ದಿನಾಂಕ: 26/27.06.2012

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: Logaer Machines (I) Ltd. ಕಂಪನಿಗೆ ಧಾರವಾಡ ಮತ್ತು ಹಾವೇರಿ ಜಿಲ್ಲೆಗಳಲ್ಲಿ 150.66 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: Logaer Machines (I) Ltd. ಕಂಪನಿಯ ಹೆಸರನ್ನು ಮೆ:: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಲಿಮಿಟೆಡ್ ಎಂದು ಬದಲಾಯಿಸಲು ಹಾಗೂ ಮೆ:: Logaer Machines (I) Ltd. ರವರಿಗೆ ಹಂಚಿಕೆಯಾಗಿರುವ ಎಲ್ಲಾ ಪವನ ವಿದ್ಯುತ್ ಯೋಜನೆಗಳನ್ನು ಮೆ:: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಲಿಮಿಟೆಡ್ ಇವರಿಗೆ ವರ್ಗಾಯಿಸಲು ಅನುಮೋದನೆ ನೀಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ, ಕಂಪನಿಗೆ ಮಂಜೂರಾಗಿದ್ದ 150.66 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಅಂಶಿಕ ಸಾಮರ್ಥ್ಯವಾದ 69.63 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 200 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಈ ಕೆಳಕಂಡ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹೆಚ್ಚಿಸಿ ಆದೇಶಿಸಲಾಗಿತ್ತು.

| Sl No. | Geographical Area Details of the Project | Sanctioned capacity in MW | Enhancement Proposed in MW | No. of WTGs & rating in KW |
|---|---|---|---|---|
| 1 | A large plain area spread around the village of Timmapura, Kabnur, Ingalagi, Ramapura in Haveri and Dharwad District and it also consists of plains with higher elevations and has two main peaks. The proposed area is held by the following Geographical co-oridinates :-<br>**Latitude**: 15°1’55”- 15°8’0” N<br>**Longitude**: 75°08’56”- 75°14’23” E<br>**Ridge peaks:** 701, 714, 682, 717, 713, 698, 733, 722m AMSL. | 19.80 MW | 59.40 MW | 79.20 MW<br>(99 x 800 KW) |
| 2 | A very vast area encompasses high plains and small ridges spread around the villages Kongapura, Sisvinhal, Shanlipur, Huvinsigli, Sigli, Gudgeri and Ramgeri. A railway track runs into this area. This area has moderate evelations varying from 580 to 680 Mtrs and also consists of several peaks. The main places of this areas are Halgur, Gudgeri, Lakshmeshwar, Sigli, Karadgi, Nelgudda etc and the area is covered in the following Geographical co-oridinates :- | 49.83 (part capacity of 67.65 MW) | 70.97 | 120.80 MW<br>(151 x 800 KW) |

| Sl No. | Geographical Area Details of the Project | Sanctioned capacity in MW | Enhancement Proposed in MW | No. of WTGs & rating in KW |
|---|---|---|---|---|
| | **Latitude**: 15°0'0"- 15°10'30" N<br>**Longitude**: 75°15'0"- 75°28'19" E<br>**Ridge peaks:** 681, 671, 676, 638, 624, 698, 664, 701, 720, 663, 682, 664, 708, 665, 664m AMSL. | | | |

ಮೇಲೆ ಓದಲಾದ (4)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ : ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಾವೇರಿ ಮತ್ತು ಧಾರವಾಡ ಜಿಲ್ಲೆಯ ವಿವಿಧ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 200 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 0.8 ಮೆ.ವ್ಯಾ. ಸಾಮರ್ಥ್ಯದ ಯೋಜನೆಯನ್ನು ಮೆ:: ಸ್ವಸ್ತಿಕ್ ಕನ್ಸ್ಟ್ರಕ್ಷನ್ ಸರ್ವೀಸಸ್ ರವರಿಗೆ ವರ್ಗಾಯಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ. ಅಲ್ಲದೆ, ಸದರಿ ಯೋಜನೆಗೆ ಅವಶ್ಯಕವಾದ ಭೂಮಿಯು ಖಾಸಗಿ ಜಮೀನಾಗಿದ್ದು, ಈ ಯೋಜನೆಯನ್ನು 30.09.2012ರೊಳಗೆ ಅನುಷ್ಠಾನಗೊಳಿಸುವ, ಉತ್ಪಾದನೆ ಆಗುವ ವಿದ್ಯುತ್ತನ್ನು REC Mechanism ನ ಅಡಿಯಲ್ಲಿ ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ ವಿದ್ಯುತ್ ಖರೀದಿ ಒಪ್ಪಂದದ ಮೂಲಕ ಸರಬರಾಜು ಮಾಡಲಾಗುವುದೆಂದು ವರದಿ ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 183 ಎನ್‌ಸಿಇ 2012, ಬೆಂಗಳೂರು, ದಿನಾಂಕ: 05.07.2012.**

ಮೆ : ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಾವೇರಿ ಮತ್ತು ಧಾರವಾಡ ಜಿಲ್ಲೆಯ ವಿವಿಧ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 200 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ **0.8 ಮೆ.ವ್ಯಾ.** ಸಾಮರ್ಥ್ಯದ ಯೋಜನೆಯನ್ನು ಮೆ:: ಸ್ವಸ್ತಿಕ್ ಕನ್ಸ್ಟ್ರಕ್ಷನ್ ಸರ್ವೀಸಸ್ ರವರಿಗೆ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು **ವರ್ಗಾಯಿಸಲಾಗಿದೆ:–**

**Land details of the Project**

| Village Name | Taluk/ District | MW | Land Survey number | WTG's No. | Extent of Land per WTG (Acres) | Latitude, Longitude and Ridge peaks |
|---|---|---|---|---|---|---|
| Hulsogi | Shiggaon/ Haveri | 0.8 | 73/2 | 98 | 1.1 | Lat: 15°3'46.39" N<br>Long: 75°11'14.53'' E |

1 **ಮೆ:: ಸ್ವಸ್ತಿಕ್ ಕನ್ಸ್ಟ್ರಕ್ಷನ್ ಸರ್ವೀಸಸ್** ರವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 2011 ದಿನಾಂಕ 06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.

2 **ಮೆ:: ಸ್ವಸ್ತಿಕ್ ಕನ್ಸ್ಟ್ರಕ್ಷನ್ ಸರ್ವೀಸಸ್** ರವರು REC Mechanism ನ ಅಡಿಯಲ್ಲಿ ವಿದ್ಯುತ್ ಖರೀದಿ ಒಪ್ಪಂದವನ್ನು ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಹುಬ್ಬಳ್ಳಿ ಇವರೊಂದಿಗೆ ಮಾಡಿಕೊಳ್ಳತಕ್ಕದ್ದು.

3 ಸದರಿ ಯೋಜನೆಯನ್ನು ದಿನಾಂಕ 30.9.2012ರೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು. ಈ ಕುರಿತಂತೆ ಕ್ರೆಡಲ್ ಅಭಿವೃದ್ಧಿದಾರರಿಂದ ಒಪ್ಪಿಗೆ ಪತ್ರ ಪಡೆಯತಕ್ಕದ್ದು (committment letter)

4 ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೌಸಲ್ಯಾ**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ,

**ಪಿ.ಆರ್. 1813**

## ಇಂಧನ ಸಚಿವಾಲಯ

**ವಿಷಯ:** ಮೆ: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಂಚಿಕೆಯಾಗರುವ 200 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ 1.6 ಮೆ.ವ್ಯಾ ಸಾಮರ್ಥ್ಯವನ್ನು ಮೆ: ಪ್ರಸಾದ್ ಟೆಕ್ನಾಲಜಿ ಪಾರ್ಕ್ ಪ್ರೈವೇಟ್ ಲಿಮಿಟೆಡ್ ರವರಿಗೆ ವರ್ಗಾವಣೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 42 ಎನ್‌ಸಿಇ 2006 ದಿನಾಂಕ: 20.4.2006.

2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 462 ಎನ್‌ಸಿಇ 2006 ದಿನಾಂಕ: 19.12.2006.

3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 322 ಎನ್‌ಸಿಇ 2011 ದಿನಾಂಕ: 28.10.2011.

4) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/SRR-PTPPL1.6 MW (VWILLP-200 MW)/2012/1759 ದಿನಾಂಕ: 26/27.06.2012

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: Logaer Machines (I) Ltd. ಕಂಪನಿಗೆ ಧಾರವಾಡ ಮತ್ತು ಹಾವೇರಿ ಜಿಲ್ಲೆಗಳಲ್ಲಿ 150.66 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: Logaer Machines (I) Ltd. ಕಂಪನಿಯ ಹೆಸರನ್ನು ಮೆ:: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಲಿಮಿಟೆಡ್ ಎಂದು ಬದಲಾಯಿಸಲು ಹಾಗೂ ಮೆ:: Logaer Machines (I) Ltd. ರವರಿಗೆ ಹಂಚಿಕೆಯಾಗಿರುವ ಎಲ್ಲಾ ಪವನ ವಿದ್ಯುತ್ ಯೋಜನೆಗಳನ್ನು ಮೆ:: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಲಿಮಿಟೆಡ್ ಇವರಿಗೆ ವರ್ಗಾಯಿಸಲು ಅನುಮೋದನೆ ನೀಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ, ಕಂಪನಿಗೆ ಮಂಜೂರಾಗಿದ್ದ 150.66 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಅಂಶಿಕ ಸಾಮರ್ಥ್ಯವಾದ 69.63 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 200 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಈ ಕೆಳಕಂಡ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹೆಚ್ಚಿಸಿ ಆದೇಶಿಸಲಾಗಿತ್ತು.

| Sl No. | Geographical Area Details of the Project | Sanctioned capacity in MW | Enhancement Proposed in MW | No. of WTGs & rating in KW |
|---|---|---|---|---|
| 1 | A large plain area spread around the village of Timmapura, Kabnur, Ingalagi, Ramapura in Haveri and Dharwad District and it also consists of plains with higher elevations and has two main peaks. The proposed area is held by the following Geographical co-oridinates :-<br>**Latitude**: 15°1'55"- 15°8'0" N<br>**Longitude**: 75°08'56"- 75°14'23" E<br>**Ridge peaks:** 701, 714, 682, 717, 713, 698, 733, 722m AMSL. | 19.80 MW | 59.40 MW | 79.20 MW<br>(99 x 800 KW) |
| 2 | A very vast area encompasses high plains and small ridges spread around the villages Kongapura, Sisvinhal, Shanlipur, Huvinsigli, Sigli, Gudgeri and Ramgeri. A railway track runs into this area. This area has moderate evelations varying from 580 to 680 Mtrs and also consists of several peaks. The main places of this areas are Halgur, Gudgeri, Lakshmeshwar, Sigli, Karadgi, Nelgudda etc and the area is covered in the following Geographical co-oridinates :-<br>**Latitude**: 15°0'0"- 15°10'30" N | 49.83 (part capacity of 67.65 MW) | 70.97 | 120.80 MW<br>(151 x 800 KW) |

| Sl No. | Geographical Area Details of the Project | Sanctioned capacity in MW | Enhancement Proposed in MW | No. of WTGs & rating in KW |
|---|---|---|---|---|
| | **Longitude**: 75°15'0"- 75°28'19" E<br>**Ridge peaks:** 681, 671, 676, 638, 624, 698, 664, 701, 720, 663, 682, 664, 708, 665, 664m AMSL. | | | |

ಮೇಲೆ ಓದಲಾದ (4)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ : ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಾವೇರಿ ಮತ್ತು ಧಾರವಾಡ ಜಿಲ್ಲೆಯ ವಿವಿಧ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 200 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 1.6 ಮೆ.ವ್ಯಾ. ಸಾಮರ್ಥ್ಯದ ಯೋಜನೆಯನ್ನು ಮೆ:: ಪ್ರಸಾದ್ ಟೆಕ್ನಾಲಜಿ ಪಾರ್ಕ್ ಪ್ರೈವೇಟ್ ಲಿಮಿಟೆಡ್ ರವರಿಗೆ ವರ್ಗಾಯಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ. ಅಲ್ಲದೆ, ಸದರಿ ಯೋಜನೆಗೆ ಅವಶ್ಯಕವಾದ ಭೂಮಿಯು ಖಾಸಗಿ ಜಮೀನಾಗಿದ್ದು, ಈ ಯೋಜನೆಯನ್ನು 30.09.2012ರೊಳಗೆ ಅನುಷ್ಠಾನಗೊಳಿಸುವ, ಉತ್ಪಾದನೆ ಆಗುವ ವಿದ್ಯುತ್ತನ್ನು ವೀಲಿಂಗ್ ಮತ್ತು ಬ್ಯಾಂಕಿಂಗ್ ಅಡಿಯಲ್ಲಿ ಮೂರನೆ ವ್ಯಕ್ತಿಗೆ ಮಾರಾಟ ಮಾಡಲಾಗುವುದೆಂದು ವರದಿ ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 184 ಎನ್‌ಸಿಇ 2012, ಬೆಂಗಳೂರು, ದಿನಾಂಕ: 05.07.2012.**

ಮೆ : ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಾವೇರಿ ಮತ್ತು ಧಾರವಾಡ ಜಿಲ್ಲೆಯ ವಿವಿಧ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 200 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ **1.6 ಮೆ.ವ್ಯಾ.** ಸಾಮರ್ಥ್ಯದ ಯೋಜನೆಯನ್ನು ಮೆ:: ಪ್ರಸಾದ್ ಟೆಕ್ನಾಲಜಿ ಪಾರ್ಕ್ ಪ್ರೈವೇಟ್ ಲಿಮಿಟೆಡ್ ರವರಿಗೆ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು **ವರ್ಗಾಯಿಸಲಾಗಿದೆ:–**

**Land details of the Project**

| Village Name | Taluk/ District | MW | Land Survey number | WTG's No. | Extent of Land per WTG (Acres) | Latitude, Longitude and Ridge peaks |
|---|---|---|---|---|---|---|
| Kyalakonda | Savanur/ Haveri | 0.800 | 201/3 | 139 | 1.1 | Lat: 15°3'35" N<br>Long: 75°16'22.58'' E |
| Madapura | Savanur/ Haveri | 0.800 | 52/4 | 140 | 1.1 | Lat: 15°3'58.05" N<br>Long: 75°16'48.84'' E |
| | **Total** | **1.60** | | | | |

1 **ಮೆ:: ಪ್ರಸಾದ್ ಟೆಕ್ನಾಲಜಿ ಪಾರ್ಕ್ ಪ್ರೈವೇಟ್ ಲಿಮಿಟೆಡ್** ರವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 2011 ದಿ : 06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.

2 **ಮೆ:: ಪ್ರಸಾದ್ ಟೆಕ್ನಾಲಜಿ ಪಾರ್ಕ್ ಪ್ರೈವೇಟ್ ಲಿಮಿಟೆಡ್** ರವರು ವೀಲಿಂಗ್ ಮತ್ತು ಬ್ಯಾಂಕಿಂಗ್ ಸಂಬಂಧಿಸಿದ ಎಸ್ಕಾಂ/ಕೆಪಿಟಿಸಿಎಲ್‌ನೊಂದಿಗೆ ಮಾಡಿಕೊಳ್ಳಲು ಅನುಮೋದಿಸಿದೆ.

3 ಸದರಿ ಯೋಜನೆಯನ್ನು ದಿನಾಂಕ 30.9.2012ರೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು. ಈ ಕುರಿತಂತೆ ಕ್ರೆಡಲ್ ಅಭಿವೃದ್ಧಿದಾರರಿಂದ ಒಪ್ಪಿಗೆ ಪತ್ರ ಪಡೆಯತಕ್ಕದ್ದು (committment letter)

4 ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೌಸಲ್ಯಾ**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

**ಪಿ.ಆರ್. 1814**

## ಇಂಧನ ಸಚಿವಾಲಯ

**ವಿಷಯ:** ಮೆ: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಂಚಿಕೆಯಾಗಿರುವ 200 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ 1.6 ಮೆ.ವ್ಯಾ ಸಾಮರ್ಥ್ಯವನ್ನು ಮೆ: ಅಭಿಲಾಷ್ ಸಾಫ್ಟವೇರ್ ಡೆವಲಪ್‌ಮೆಂಟ್ ಸೆಂಟರ್ ರವರಿಗೆ ವರ್ಗಾವಣೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 42 ಎನ್‌ಸಿಇ 2006 ದಿನಾಂಕ: 20.4.2006.

2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 462 ಎನ್‌ಸಿಇ 2006 ದಿನಾಂಕ: 19.12.2006.

3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 322 ಎನ್‌ಸಿಇ 2011 ದಿನಾಂಕ: 28.10.2011.

4) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/SRR/ASDC-1.6 MW (VWILLP- 200 MW)/2012/1757 ದಿನಾಂಕ: 26/27.06.2012

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: Logaer Machines (I) Ltd. ಕಂಪನಿಗೆ ಧಾರವಾಡ ಮತ್ತು ಹಾವೇರಿ ಜಿಲ್ಲೆಗಳಲ್ಲಿ 150.66 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: Logaer Machines (I) Ltd. ಕಂಪನಿಯ ಹೆಸರನ್ನು ಮೆ:: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಲಿಮಿಟೆಡ್ ಎಂದು ಬದಲಾಯಿಸಲು ಹಾಗೂ ಮೆ:: Logaer Machines (I) Ltd. ರವರಿಗೆ ಹಂಚಿಕೆಯಾಗಿರುವ ಎಲ್ಲಾ ಪವನ ವಿದ್ಯುತ್ ಯೋಜನೆಗಳನ್ನು ಮೆ:: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಲಿಮಿಟೆಡ್ ಇವರಿಗೆ ವರ್ಗಾಯಿಸಲು ಅನುಮೋದನೆ ನೀಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ, ಕಂಪನಿಗೆ ಮಂಜೂರಾಗಿದ್ದ 150.66 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಅಂಶಿಕ ಸಾಮರ್ಥ್ಯವಾದ 69.63 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 200 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಈ ಕೆಳಕಂಡ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹೆಚ್ಚಿಸಿ ಆದೇಶಿಸಲಾಗಿತ್ತು.

| Sl No. | Geographical Area Details of the Project | Sanctioned capacity in MW | Enhancement Proposed in MW | No. of WTGs & rating in KW |
|---|---|---|---|---|
| 1 | A large plain area spread around the village of Timmapura, Kabnur, Ingalagi, Ramapura in Haveri and Dharwad District and it also consists of plains with higher elevations and has two main peaks. The proposed area is held by the following Geographical co-oridinates :-<br>**Latitude**: 15°1'55"- 15°8'0" N<br>**Longitude**: 75°08'56"- 75°14'23" E<br>**Ridge peaks:** 701, 714, 682, 717, 713, 698, 733, 722m AMSL. | 19.80 MW | 59.40 MW | 79.20 MW<br>(99 x 800 KW) |
| 2 | A very vast area encompasses high plains and small ridges spread around the villages Kongapura, Sisvinhal, Shanlipur, Huvinsigli, Sigli, Gudgeri and Ramgeri. A railway track runs into this area. This area has moderate evelations varying from 580 to 680 Mtrs and also consists of several peaks. The main places of this areas are Halgur, Gudgeri, Lakshmeshwar, Sigli, Karadgi, Nelgudda etc and the area is covered in the following Geographical co-oridinates :-<br>**Latitude**: 15°0'0"- 15°10'30" N<br>**Longitude**: 75°15'0"- 75°28'19" E<br>**Ridge peaks:** 681, 671, 676, 638, 624, 698, 664, 701, 720, 663, 682, 664, 708, 665, 664m AMSL. | 49.83 (part capacity of 67.65 MW) | 70.97 | 120.80 MW<br>(151 x 800 KW) |

ಮೇಲೆ ಓದಲಾದ (4)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ : ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಾವೇರಿ ಮತ್ತು ಧಾರವಾಡ ಜಿಲ್ಲೆಯ ವಿವಿಧ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 200 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 1.6 ಮೆ.ವ್ಯಾ. ಸಾಮರ್ಥ್ಯದ ಯೋಜನೆಯನ್ನು ಮೆ:: ಅಭಿಲಾಷ್ ಸಾಫ್ಟವೇರ್ ಡೆವಲಪ್‌ಮೆಂಟ್ ಸೆಂಟರ್ ರವರಿಗೆ ವರ್ಗಾಯಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ. ಅಲ್ಲದೆ, ಸದರಿ ಯೋಜನೆಗೆ ಅವಶ್ಯಕವಾದ ಭೂಮಿಯು ಖಾಸಗಿ ಜಮೀನಾಗಿದ್ದು, ಈ ಯೋಜನೆಯನ್ನು 30.09.2012ರೊಳಗೆ ಅನುಷ್ಠಾನಗೊಳಿಸುವ, ಉತ್ಪಾದನೆ ಆಗುವ ವಿದ್ಯುತ್ತನ್ನು ವೀಲಿಂಗ್ ಮತ್ತು ಬ್ಯಾಂಕಿಂಗ್ ಅಡಿಯಲ್ಲಿ ಮೂರನೆ ವ್ಯಕ್ತಿಗೆ ಮಾರಾಟ ಮಾಡಲಾಗುವುದೆಂದು ವರದಿ ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 185 ಎನ್‌ಸಿಇ 2012, ಬೆಂಗಳೂರು, ದಿನಾಂಕ: 05.07.2012.**

ಮೆ : ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಾವೇರಿ ಮತ್ತು ಧಾರವಾಡ ಜಿಲ್ಲೆಯ ವಿವಿಧ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 200 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ **1.6 ಮೆ.ವ್ಯಾ.** ಸಾಮರ್ಥ್ಯದ ಯೋಜನೆಯನ್ನು ಮೆ:: ಅಭಿಲಾಷ್ ಸಾಫ್ಟವೇರ್ ಡೆವಲಪ್‌ಮೆಂಟ್ ಸೆಂಟರ್ ರವರಿಗೆ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು **ವರ್ಗಾಯಿಸಲಾಗಿದೆ:–**

**Land details of the Project**

| Village Name | Taluk/ District | MW | Land Survey number | WTG's No. | Extent of Land per WTG (Acres) | Latitude, Longitude and Ridge peaks |
|---|---|---|---|---|---|---|
| Kyalakonda | Savanur/ Haveri | 0.800 | 13/1+2/A | 145 | 1.1 | Lat: 15°4'50.37" N Long: 75°16'7.83'' E |
| Kyalakonda | Savanur/ Haveri | 0.800 | 14/2B | 146 | 1.1 | Lat: 15°4'56.45" N Long: 75°16'11.9'' E |
| | **Total** | **1.60** | | | | |

1 **ಮೆ:: ಅಭಿಲಾಷ್ ಸಾಫ್ಟವೇರ್ ಡೆವಲಪ್‌ಮೆಂಟ್ ಸೆಂಟರ್** ರವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 2011 ದಿ : 06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.

2 **ಮೆ:: ಅಭಿಲಾಷ್ ಸಾಫ್ಟವೇರ್ ಡೆವಲಪ್‌ಮೆಂಟ್ ಸೆಂಟರ್** ರವರು ವೀಲಿಂಗ್ ಮತ್ತು ಬ್ಯಾಂಕಿಂಗ್ ಸಂಬಂಧಿಸಿದ ಎಸ್ಕಾಂ/ಕೆಪಿಟಿಸಿಎಲ್‌ನೊಂದಿಗೆ ಮಾಡಿಕೊಳ್ಳಲು ಅನುಮೋದಿಸಿದೆ.

3 ಸದರಿ ಯೋಜನೆಯನ್ನು ದಿನಾಂಕ 30.9.2012ರೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು. ಈ ಕುರಿತಂತೆ ಕ್ರೆಡಲ್ ಅಭಿವೃದ್ಧಿದಾರರಿಂದ ಒಪ್ಪಿಗೆ ಪತ್ರ ಪಡೆಯತಕ್ಕದ್ದು (committment letter)

4 ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೌಸಲ್ಯಾ**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

**ಪಿ.ಆರ್. 1815**

## ಇಂಧನ ಸಚಿವಾಲಯ

**ವಿಷಯ:** ಮೆ: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಂಚಿಕೆಯಾಗರುವ 200 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ 0.8 ಮೆ.ವ್ಯಾ ಸಾಮರ್ಥ್ಯವನ್ನು ಮೆ: ಎ.ಬಿ. ಮಲ್ಲಿಕಾರ್ಜುನ ರವರಿಗೆ ವರ್ಗಾವಣೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 42 ಎನ್‌ಸಿಇ 2006 ದಿನಾಂಕ: 20.4.2006.

2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 462 ಎನ್‌ಸಿಇ 2006 ದಿನಾಂಕ: 19.12.2006.
3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 322 ಎನ್‌ಸಿಇ 2011 ದಿನಾಂಕ: 28.10.2011.
4) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/ABM-0.8/(VWILLP-200 MW) 2012/1758 ದಿನಾಂಕ: 26/27.06.2012

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: Logaer Machines (I) Ltd. ಕಂಪನಿಗೆ ಧಾರವಾಡ ಮತ್ತು ಹಾವೇರಿ ಜಿಲ್ಲೆಗಳಲ್ಲಿ 150.66 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: Logaer Machines (I) Ltd. ಕಂಪನಿಯ ಹೆಸರನ್ನು ಮೆ:: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಲಿಮಿಟೆಡ್ ಎಂದು ಬದಲಾಯಿಸಲು ಹಾಗೂ ಮೆ:: Logaer Machines (I) Ltd. ರವರಿಗೆ ಹಂಚಿಕೆಯಾಗಿರುವ ಎಲ್ಲಾ ಪವನ ವಿದ್ಯುತ್ ಯೋಜನೆಗಳನ್ನು ಮೆ:: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಲಿಮಿಟೆಡ್ ಇವರಿಗೆ ವರ್ಗಾಯಿಸಲು ಅನುಮೋದನೆ ನೀಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ, ಕಂಪನಿಗೆ ಮಂಜೂರಾಗಿದ್ದ 150.66 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಅಂಶಿಕ ಸಾಮರ್ಥ್ಯವಾದ 69.63 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 200 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಈ ಕೆಳಕಂಡ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹೆಚ್ಚಿಸಿ ಆದೇಶಿಸಲಾಗಿತ್ತು.

| Sl No. | Geographical Area Details of the Project | Sanctioned capacity in MW | Enhancement Proposed in MW | No. of WTGs & rating in KW |
|---|---|---|---|---|
| 1 | A large plain area spread around the village of Timmapura, Kabnur, Ingalagi, Ramapura in Haveri and Dharwad District and it also consists of plains with higher elevations and has two main peaks. The proposed area is held by the following Geographical co-oridinates :-<br>**Latitude**: 15°1'55"- 15°8'0" N<br>**Longitude**: 75°08'56"- 75°14'23" E<br>**Ridge peaks:** 701, 714, 682, 717, 713, 698, 733, 722m AMSL. | 19.80 MW | 59.40 MW | 79.20 MW (99 x 800 KW) |
| 2 | A very vast area encompasses high plains and small ridges spread around the villages Kongapura, Sisvinhal, Shanlipur, Huvinsigli, Sigli, Gudgeri and Ramgeri. A railway track runs into this area. This area has moderate evelations varying from 580 to 680 Mtrs and also consists of several peaks. The main places of this areas are Halgur, Gudgeri, Lakshmeshwar, Sigli, Karadgi, Nelgudda etc and the area is covered in the following Geographical co-oridinates :-<br>**Latitude**: 15°0'0"- 15°10'30" N<br>**Longitude**: 75°15'0"- 75°28'19" E<br>**Ridge peaks:** 681, 671, 676, 638, 624, 698, 664, 701, 720, 663, 682, 664, 708, 665, 664m AMSL. | 49.83 (part capacity of 67.65 MW) | 70.97 | 120.80 MW (151 x 800 KW) |

ಮೇಲೆ ಓದಲಾದ (4)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ : ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಾವೇರಿ ಮತ್ತು ಧಾರವಾಡ ಜಿಲ್ಲೆಯ ವಿವಿಧ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 200 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 0.8 ಮೆ.ವ್ಯಾ. ಸಾಮರ್ಥ್ಯದ ಯೋಜನೆಯನ್ನು ಮೆ:: ಎ.ಬಿ. ಮಲ್ಲಿಕಾರ್ಜುನ ರವರಿಗೆ

ವರ್ಗಾಯಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ. ಅಲ್ಲದೆ, ಸದರಿ ಯೋಜನೆಗೆ ಅವಶ್ಯಕವಾದ ಭೂಮಿಯು ಖಾಸಗಿ ಜಮೀನಾಗಿದ್ದು, ಈ ಯೋಜನೆಯನ್ನು 30.09.2012ರೊಳಗೆ ಅನುಷ್ಠಾನಗೊಳಿಸುವ, ಉತ್ಪಾದನೆ ಆಗುವ ವಿದ್ಯುತ್ತನ್ನು ವೀಲಿಂಗ್ ಮತ್ತು ಬ್ಯಾಂಕಿಂಗ್ ಅಡಿಯಲ್ಲಿ ಮೂರನೆ ವ್ಯಕ್ತಿಗೆ ಮಾರಾಟ ಮಾಡಲಾಗುವುದೆಂದು ವರದಿ ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 186 ಎನ್‌ಸಿಇ 2012, ಬೆಂಗಳೂರು, ದಿನಾಂಕ: 05.07.2012.**

ಮೆ : ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಾವೇರಿ ಮತ್ತು ಧಾರವಾಡ ಜಿಲ್ಲೆಯ ವಿವಿಧ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 200 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ **0.8 ಮೆ.ವ್ಯಾ.** ಸಾಮರ್ಥ್ಯದ ಯೋಜನೆಯನ್ನು ಮೆ:: ಎ.ಬಿ. ಮಲ್ಲಿಕಾರ್ಜುನ ರವರಿಗೆ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು **ವರ್ಗಾಯಿಸಲಾಗಿದೆ:–**

**Land details of the Project**

| Village Name | Taluk/ District | MW | Land Survey number | WTG's No. | Extent of Land per WTG (Acres) | Latitude, Longitude and Ridge peaks |
|---|---|---|---|---|---|---|
| Kongapura | Shiggaon/Haveri | 0.80 | 41/1 | 136 | 1.1 | Lat: 15°2'48.74" N<br>Long: 75°16'7.51'' E |

1 **ಮೆ:: ಎ.ಬಿ. ಮಲ್ಲಿಕಾರ್ಜುನ** ರವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 2011 ದಿ : 06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.

2 **ಮೆ:: ಎ.ಬಿ. ಮಲ್ಲಿಕಾರ್ಜುನ** ರವರು ವೀಲಿಂಗ್ ಮತ್ತು ಬ್ಯಾಂಕಿಂಗ್ ಸಂಬಂಧಿಸಿದ ಎಸ್ಕಾಂ/ಕೆಪಿಟಿಸಿಎಲ್‌ನೊಂದಿಗೆ ಮಾಡಿಕೊಳ್ಳಲು ಅನುಮೋದಿಸಿದೆ.

3 ಸದರಿ ಯೋಜನೆಯನ್ನು ದಿನಾಂಕ 30.9.2012ರೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು. ಈ ಕುರಿತಂತೆ ಕ್ರೆಡಲ್ ಅಭಿವೃದ್ಧಿದಾರರಿಂದ ಒಪ್ಪಿಗೆ ಪತ್ರ ಪಡೆಯತಕ್ಕದ್ದು (committment letter)

4 ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೌಸಲ್ಯಾ**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

**ಪಿ.ಆರ್. 1812**

## ಇಂಧನ ಸಚಿವಾಲಯ

**ವಿಷಯ:** ಮೆ: ಆರ್.ಆರ್.ಬಿ. ಎನರ್ಜಿ ಲಿಮಿಟೆಡ್ ಕಂಪನಿಯವರು ಅನುಷ್ಠನಗೊಳಿಸಿರುವ 0.60 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ: ಹೈಟೆನ್ ಫಾಸ್ಟ್‌ನರ್ಸ್ ಪ್ರೈವೇಟ್ ಲಿಮಿಟೆಡ್ ರವರಿಗೆ ವರ್ಗಾಯಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 82 ಎನ್‌ಸಿಇ 2010 ದಿನಾಂಕ: 06.3.2010.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/HTFPL-0.6 MW (L.No.57)/2012/1294 ದಿನಾಂಕ: 30.4.2012/02.05.2012

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ :: ಶಾಹ ಏಜೆನ್ಸಿ ರವರಿಗೆ ಗದಗ್ ಜಿಲ್ಲೆಯ ರೋಣ ತಾಲ್ಲೂಕಿನ ವಡೆಗೋಲ ಗ್ರಾಮದಲ್ಲಿ ಹಂಚಿಕೆಯಾಗಿದ್ದ 36.4 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 0.60 ಮೆ.ವ್ಯಾ, ಸಾಮರ್ಥ್ಯವನ್ನು ಮೆ:: ಆರ್.ಆರ್.ಬಿ. ಎನರ್ಜಿ ಲಿಮಿಟೆಡ್ ಕಂಪನಿಗೆ ಈ ಕೆಳಗೆ ವಿವರಿಸಿರುವಂತೆ ವರ್ಗಾಯಿಸಲಾಗಿತ್ತು.

| Village Name | Taluk & District | Land Survey Number | Extend in Land | Wind Turbine Generator Location No. |
|---|---|---|---|---|
| Vadegola | Ron Taluk, Gadag District | 21 | 0.82 Acres per WTG x 1 No's | 57 |
| Vadegola | Ron Taluk, Gadag District | 42 | | |

ಮೇಲೆ ಓದಲಾದ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ : ಆರ್.ಆರ್.ಬಿ. ಎನರ್ಜಿ ಲಿಮಿಟೆಡ್ ಕಂಪನಿಯವರಿಗೆ ವರ್ಗಾವಣೆಗೊಂಡು ದಿನಾಂಕ 31.3.2010ರಲ್ಲಿ ಅನುಷ್ಠಾನಗೊಂಡಿರುವ 0.60 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ : ಹೈಟೆನ್ ಫಾಸ್ಟ್‌ನರ್ಸ್ ಪ್ರೈವೇಟ್ ಲಿಮಿಟೆಡ್ ರವರಿಗೆ ವರ್ಗಾಯಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ ಹಾಗೂ ಉತ್ಪಾದಿತ ವಿದ್ಯುತ್ತನ್ನು ವಿದ್ಯುತ್ ಸರಬರಾಜು ಕಂಪನಿಗೆ ಸರಬರಾಜು ಮಾಡಲು ವಿದ್ಯುತ್ ಖರೀದಿ ಒಪ್ಪಂದ ಮಾಡಿಕೊಳ್ಳಲಿರುವರು ಎಂದು ತಿಳಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 158 ಎನ್‌ಸಿಇ 2012, ಬೆಂಗಳೂರು, ದಿನಾಂಕ: 22.05.2012**

ಮೆ : ಆರ್.ಆರ್.ಬಿ. ಎನರ್ಜಿ ಲಿಮಿಟೆಡ್ ಕಂಪನಿಯವರ ಗದಗ್ ಜಿಲ್ಲೆಯ ರೋಣ ತಾಲ್ಲೂಕಿನ ವಡೆಗೋಲ ಗ್ರಾಮದಲ್ಲಿನ **0.60 ಮೆ.ವ್ಯಾ.** ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ : ಹೈಟೆನ್ ಫಾಸ್ಟ್‌ನರ್ಸ್ ಪ್ರೈವೇಟ್ ಲಿಮಿಟೆಡ್ ರವರಿಗೆ ಈ ಕೆಳಕಂಡ ಷರತ್ತಿಗೊಳಪಟ್ಟು **ವರ್ಗಾಯಿಸಲಾಗಿದೆ:–**

1 **ಮೆ:: ಹೈಟೆನ್ ಫಾಸ್ಟ್‌ನರ್ಸ್ ಪ್ರೈವೇಟ್ ಲಿಮಿಟೆಡ್** ರವರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ ವಿದ್ಯುತ್ ಖರೀದಿ ಒಪ್ಪಂದವನ್ನು ಮಾಡಿಕೊಳ್ಳತಕ್ಕದ್ದು.

2 ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೌಸಲ್ಯಾ**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

**ಪಿ.ಆರ್. 1483**

## ಇಂಧನ ಸಚಿವಾಲಯ

**ವಿಷಯ:** ಮೆ:: ಸತೀಶ್ ಶುಗರ್ಸ್ ಲಿಮಿಟೆಡ್ ರವರ ಸಹ–ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 34 ಮೆ.ವ್ಯಾ. (ಗ್ರಾಸ್) ಹಾಗೂ 22 ಮೆ.ವ್ಯಾ. (ಎಕ್ಸ್‌ಪೋರ್ಟೆಬಲ್) ನಿಂದ 54 ಮೆ.ವ್ಯಾ. (ಗ್ರಾಸ್) ಹಾಗೂ 38 ಮೆ.ವ್ಯಾ. (ಎಕ್ಸ್‌ಪೋರ್ಟೆಬಲ್) ಸಾಮರ್ಥ್ಯಕ್ಕೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರಿ ಆದೇಶ ಸಂಖ್ಯೆ ಇಎನ್ 405 ಎನ್‌ಸಿಇ 2010 ದಿನಾಂಕ :28.10.2010.
2. ಸರ್ಕಾರಿ ಆದೇಶ ಸಂಖ್ಯೆ ಇಎನ್ 272 ಎನ್‌ಸಿಇ 2011 ದಿನಾಂಕ :01.07.2011.
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/ 04/ಎಫ್–38/SDSSKN/2012–13/1263 ದಿನಾಂಕ: 27/28.4.2012.

**ಪ್ರಸ್ತಾವನೆ: –**

ಮೇಲೆ ಓದಲಾದ (1)ರ ಆದೇಶದಲ್ಲಿ ಮೆ:: ಸತೀಶ್ ಶುಗರ್ಸ್ ಲಿಮಿಟೆಡ್ ಕಂಪನಿಗೆ ಬೆಳಗಾವಿ ಜಿಲ್ಲೆಯ ಗೋಕಾಕ್ ತಾಲ್ಲೂಕಿನ ಹುಣಶ್ಯಾಳ ಪಿಜಿ ಗ್ರಾಮದಲ್ಲಿ **16** ಮೆಗಾ ವ್ಯಾಟ್ **(gross)** ಮತ್ತು 8.00 ಮೆಗಾ ವ್ಯಾಟ್ **(exportable)** ಸಾಮರ್ಥ್ಯದ ಸಹ–ವಿದ್ಯುತ್ ಯೋಜನೆ ಸ್ಥಾಪಿಸಲು ನಿರಾಕ್ಷೇಪಣೆಯನ್ನು ನೀಡಲಾಗಿತ್ತು.

ಮೇಲೆ ಓದಲಾದ (2)ರ ಆದೇಶದಲ್ಲಿ ಮೆ:: ಸತೀಶ್ ಶುಗರ್ಸ್ ಲಿಮಿಟೆಡ್ ಇವರಿಗೆ ಬೆಳಗಾವಿ ಜಿಲ್ಲೆಯ ಗೋಕಾಕ್ ತಾಲ್ಲೂಕಿನ ಹುಣಶ್ಯಾಳ ಪಿಜಿ ಗ್ರಾಮದಲ್ಲಿ **16** ಮೆಗಾ ವ್ಯಾಟ್ **(gross)** ಮತ್ತು 8.00 ಮೆಗಾ ವ್ಯಾಟ್ **(exportable)** ಸಹ–ವಿದ್ಯುತ್ ಯೋಜನೆಗಾಗಿ ನೀಡಿರುವ ನಿರಾಕ್ಷೇಪಣೆಯನ್ನು **34.00** ಮೆಗಾ ವ್ಯಾಟ್ **(gross)** ಮತ್ತು 22.00 ಮೆಗಾ ವ್ಯಾಟ್ **(exportable)** ಸಾಮರ್ಥ್ಯಕ್ಕೆ ಹೆಚ್ಚಿಸಲಾಗಿತ್ತು.

ಮೇಲೆ ಓದಲಾದ (3)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ:: ಸತೀಶ್ ಶುಗರ್ಸ್ ಲಿಮಿಟೆಡ್ ಇವರ ಸಹ–ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು ಹಾಲಿ 34 ಮೆ.ವ್ಯಾ (ಗ್ರಾಸ್) ಹಾಗೂ 22 ಮೆ.ವ್ಯಾ. (ಎಕ್ಸ್‌ಪೋರ್ಟೆಬಲ್) ನಿಂದ 54 ಮೆ.ವ್ಯಾ (ಗ್ರಾಸ್) ಹಾಗೂ 38 ಮೆ.ವ್ಯಾ. (ಎಕ್ಸ್‌ಪೋರ್ಟೆಬಲ್) ಸಾಮರ್ಥ್ಯಕ್ಕೆ ಹೆಚ್ಚಿಸುವ ಕುರಿತು ಅಭಿವೃದ್ಧಿದಾರರ ಕೋರಿಕೆಯ ಮೇರೆಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ ಮತ್ತು ಈ ಯೋಜನೆಯನ್ನು ಅಕ್ಟೋಬರ್ 2013ರೊಳಗಾಗಿ ಅನುಷ್ಠಾನಗೊಳಿಸಲಾಗುವುದೆಂದು ತಿಳಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 155 ಎನ್‌ಸಿಇ 2012, ಬೆಂಗಳೂರು, ದಿನಾಂಕ: 21.05.2012.**

ಮೆ:: ಸತೀಶ್ ಶುಗರ್ಸ್ ಲಿಮಿಟೆಡ್ ಇವರು ಬೆಳಗಾವಿ ಜಿಲ್ಲೆಯ ಗೋಕಾಕ್ ತಾಲ್ಲೂಕಿನ ಹುಣಶ್ಯಾಳ ಹುನ್ಯಾಳ್ ಪಿಜಿ ಗ್ರಾಮದಲ್ಲಿ ಸ್ಥಾಪಿಸಿರುವ ಸಹ–ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು ಹಾಲಿ 34 ಮೆ.ವ್ಯಾ. (ಗ್ರಾಸ್) ಹಾಗೂ 22 ಮೆ.ವ್ಯಾ. (ಎಕ್ಸ್‌ಪೋರ್ಟೆಬಲ್) ನಿಂದ 54 ಮೆ.ವ್ಯಾ. (ಗ್ರಾಸ್) ಹಾಗೂ 38 ಮೆ.ವ್ಯಾ. (ಎಕ್ಸ್‌ಪೋರ್ಟೆಬಲ್) ಸಾಮರ್ಥ್ಯಕ್ಕೆ ಹೆಚ್ಚಿಸಿ ಆದೇಶಿಸಿದೆ. ಈ ಯೋಜನೆಯನ್ನು ಅಕ್ಟೋಬರ್ 2013ರೊಳಗಾಗಿ ಅನುಷ್ಠಾನಮಾಡತಕ್ಕದ್ದು.

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೌಸಲ್ಯಾ**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

**ಪಿ.ಆರ್. 1484**

**ಇಂಧನ ಸಚಿವಾಲಯ**

**ಸಂಖ್ಯೆ: ಇಎನ್ 59 ಎನ್‌ಸಿಇ 2011 ಬೆಂಗಳೂರು, ದಿನಾಂಕ:23.05.2012.**

**ತಿದ್ದುಪಡಿ**

ಮೆ:: ಸರ್ಜಾನ್ ರಿಯಾಲಿಟೀಸ್ ಲಿಮಿಟೆಡ್ ಕಂಪನಿಯವರಿಗೆ ಹಾವೇರಿ ಜಿಲ್ಲೆಯಲ್ಲಿ ಅನುಮತಿಸಲಾದ 33.00 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ **4.2 ಮೆ.ವ್ಯಾ.** ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ:: ಗಿರಿರಾಜ್ ಎಂಟರ್‌ಪ್ರೈಸಸ್ ಕಂಪನಿಯವರಿಗೆ ವರ್ಗಾವಣೆ ಮಾಡಿರುವ ಸರ್ಕಾರಿ ಆದೇಶ ಸಂಖ್ಯೆ: ಇಎನ್ 59 ಎನ್‌ಸಿಇ 2011 ದಿನಾಂಕ: 03.1.2012 ರ ಆದೇಶ ಭಾಗದ ಷರತ್ತಿನ ಕ್ರಮ ಸಂಖ್ಯೆ (2) ರಲ್ಲಿ ನಮೂದಿಸಲಾಗಿರುವ

**ಮೆ : ಗಿರಿರಾಜ್ ಎಂಟರ್‌ಪ್ರೈಸಸ್** ರವರು ವಿದ್ಯುತ್ ಖರೀದಿ ಒಪ್ಪಂದವನ್ನು ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ನಿಯಮಿತ ಇವರೊಂದಿಗೆ ಮಾಡಿಕೊಳ್ಳತಕ್ಕದ್ದು

**ಎಂಬುದರ ಬದಲಾಗಿ**

**ಮೆ : ಗಿರಿರಾಜ್ ಎಂಟರ್‌ಪ್ರೈಸಸ್ ರವರು ನೀತಿ ನಿಯಮಗಳಿಗನುಸಾರವಾಗಿ ವಿದ್ಯುತ್ ಸರಬರಾಜು ಕಂಪನಿ / ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಮತ್ತು ಬ್ಯಾಂಕಿಂಗ್ ಮಾಡಿಕೊಳ್ಳಲು ಅನುಮತಿಸಿದೆ**

**ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೌಸಲ್ಯಾ**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

**ಪಿ.ಆರ್. 1486**

**ಇಂಧನ ಸಚಿವಾಲಯ**

**ವಿಷಯ:** ಮೆ: ಏಟ್ರಿಯಾ ಬೃಂದಾವನ್ ಪವರ್ ಲಿಮಿಟೆಡ್ ಇವರಿಗೆ 6.00 ಮೆಗಾ ವ್ಯಾಟ್ ಸಾಮರ್ಥ್ಯದ ವಿಶ್ವೇಶ್ವರಯ್ಯ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ:**

1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ: ಕ್ರೆಡಲ್/06/SH-772/Visvesvaraya MHS/563 ದಿನಾಂಕ:03/11.02.2011 ಮತ್ತು ಕ್ರೆಡಲ್/06/SH-771/Visvesvaraya SHP/2011/1499 ದಿನಾಂಕ:23/26.05.2011.
2. ದಿನಾಂಕ: 27.05.2011ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :–**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ: ಏಟ್ರಿಯಾ ಬೃಂದಾವನ್ ಪವರ್ ಲಿಮಿಟೆಡ್ ಇವರಿಗೆ ಮಂಡ್ಯ ಜಿಲ್ಲೆಯ ಪಾಂಡವಪುರ ತಾಲ್ಲೂಕು, ಚಿಕ್ಕಯರಹಳ್ಳಿ ಗ್ರಾಮ ಪ್ರದೇಶದಲ್ಲಿ ಕೆ.ಆರ್.ಎಸ್. ಅಣೆಕಟ್ಟು, ಉತ್ತರ ದಡದ ಹತ್ತಿರ 6.00 ಮೆಗಾ ವ್ಯಾಟ್ ಸಾಮರ್ಥ್ಯದ ವಿಶ್ವೇಶ್ವರಯ್ಯ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಮೆ: ಏಟ್ರಿಯಾ ಬೃಂದಾವನ್ ಪವರ್ ಲಿಮಿಟೆಡ್ ಇವರಿಗೆ 6.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 109 ಎನ್‌ಸಿಇ 2012, ಬೆಂಗಳೂರು, ದಿನಾಂಕ :8–11–2011**

ಮೆ: ಏಟ್ರಿಯಾ ಬೃಂದಾವನ್ ಪವರ್ ಲಿಮಿಟೆಡ್ ಇವರಿಗೆ ಮಂಡ್ಯ ಜಿಲ್ಲೆಯ ಪಾಂಡವಪುರ ತಾಲ್ಲೂಕು, ಚಿಕ್ಕಯರಹಳ್ಳಿ ಗ್ರಾಮ ಪ್ರದೇಶದಲ್ಲಿ ಕೆ.ಆರ್.ಎಸ್. ಅಣೆಕಟ್ಟು, ಉತ್ತರ ದಡದ ಹತ್ತಿರ **6.00 ಮೆಗಾ ವ್ಯಾಟ್** ಸಾಮರ್ಥ್ಯದ ವಿಶ್ವೇಶ್ವರಯ್ಯ ಕಿರು ಜಲ ವಿದ್ಯುತ್ ಯೋಜನೆಯನ್ನು ಈ ಕೆಳಕಂಡ ಶೆಡ್ಯೂಲ್ ಹಾಗೂ ಷರತ್ತಿಗೊಳಪಟ್ಟು **ಹಂಚಿಕೆ** ಮಾಡಲಾಗಿದೆ :–

| Company | MHS | Location | MW | Weir Lattitu -de | Weir Longi-tude | Power House Lattitu-de | Power House Longitu-de | FRL (M) | TWL (M) | Design Head | Design Discharge (Cumecs) |
|---|---|---|---|---|---|---|---|---|---|---|---|
| M/s. Atria Brindavan Power Ltd. | Visveswara | Chikkayarahakki village, Pandavapura Taluk, Mandya District. | 6.00 | 12°26' 09'' | 76° 34'52'' | At the toe of the weir 12° 26' 09'' | 76° 34' 52'' | 752.25 | 738 | 13 | 130 |

(ಅ) ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

1(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ

(ಆ) ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹು ದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು. (ಒಡಂಬಡಿಕೆಯನ್ನು ಕಡ್ಡಾಯವಾಗಿ ಕನ್ನಡದಲ್ಲಿಯೇ ಸಲ್ಲಿಸತಕ್ಕದ್ದು)

(ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್) ಪರಿಷ್ಕರಿಸಲು ಮೆಗಾ ವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

ಈ ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ & ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಮುಂತಾದ ಇಲಾಖೆಗಳಿಂದ ಕ್ಲಿಯರೆನ್ಸ್ ಪಡೆಯತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

2(ಅ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

(ಆ) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

3. ಯೋಜನೆಯನ್ನು ಆದೇಶದ ದಿನಾಂಕದಿಂದ **3 ವರ್ಷದ (ಮೂರು ವರ್ಷ)** ಅವಧಿಯೊಳಗೆ ಅನುಷ್ಠಾನಗೊಳಿಸತಕ್ಕದ್ದು.

4. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

5. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

6. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್ / ನೀರಾವರಿ / ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

7. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

8. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

9. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

10. ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

11. ಸದರಿ ಯೋಜನೆಯನ್ನು ಅಭಿವೃದ್ಧಿದಾರರು ಕಾರ್ಯಗತ (implement) ಮಾಡದಹೊರತು, ವರ್ಗಾವಣೆ / ಮಾರಾಟಕ್ಕೆ ಅನುಮೋದನೆ ನೀಡಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್.ಬಿ.ಕೃಷ್ಣಪ್ಪನವರ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**ಪಿ.ಆರ್. 1485**

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ರಾಯಚೂರು ನಗರಾಭಿವೃದ್ದಿ ಪ್ರಾಧಿಕಾರದಿಂದ ಸಿದ್ರಾಮಪೂರ ಮತ್ತು ಯರಗೇರಾ ರಸ್ತೆಯ ಹತ್ತಿರ ಒಟ್ಟು 51.21 ಎಕರೆ ಪ್ರದೇಶದಲ್ಲಿ ವಸತಿ ಯೋಜನೆಯಡಿ ವಿದ್ಯುತ್ ಕಾಮಗಾರಿಗಳ ಟೆಂಡರ್ ಅನುಮೋದನೆ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ನಅಇ 203 ಗುಅಪ್ರಾ 2009 ದಿನಾಂಕ:05.02.2010.

2. ಟೆಂಡರ್ ಪರಿಶೀಲನಾ ಸಮಿತಿ ದಿನಾಂಕ:31.10.2011 ರಂದು ನಡೆದ ಸಭೆಯ ನಡವಳಿಗಳು.

3. ಆಯುಕ್ತರು, ರಾಯಚೂರು ನಗರಾಭಿವೃದ್ದಿ ಪ್ರಾಧಿಕಾರ ರವರ ಪತ್ರ ಸಂಖ್ಯೆ:ರಾನಅಪ್ರಾ/ ಇಎನ್‌ಜಿಜಿ /09/ 2010–11/1443, ದಿನಾಂಕ:19.12.2011.

**ಪ್ರಸ್ತಾವನೆ:**

ಆಯುಕ್ತರು ನಗರಾಭಿವೃದ್ದಿ ಪ್ರಾಧಿಕಾರ ರಾಯಚೂರು ರವರು ರಾಯಚೂರು ನಗರಾಭಿವೃದ್ದಿ ಪ್ರಾಧಿಕಾರದಿಂದ ರಾಯಚೂರು–ಮಂತ್ರಾಲಯಂ ರಾಜ್ಯ ಹೆದ್ದಾರಿಗೆ ಹೊಂದಿಕೊಂಡಿರುವ ಸಿದ್ರಾಂಪುರ ಮತ್ತು ಯರಗೇರಾ ರಸ್ತೆಯ ನವೋದಯ ಮೆಡಿಕಲ್ ಕಾಲೇಜು ಹತ್ತಿರ ರೂ.1398.39 ಲಕ್ಷಗಳ ವೆಚ್ಚದಲ್ಲಿ ಒಟ್ಟು ವಿಸ್ತೀರ್ಣ 51 ಎಕರೆ 21 ಗುಂಟೆ ಜಮೀನಿನಲ್ಲಿ ವಸತಿ ಯೋಜನೆಯನ್ನು ಕೈಗೆತ್ತಿಕೊಳ್ಳಲು ಪ್ರಸ್ತಾವನೆ ಸಲ್ಲಿಸಿದ್ದು ಸದರಿ ಪ್ರಸ್ತಾವನೆಯನ್ನು ಸರ್ಕಾರವು ಕೂಲಕುಂಷವಾಗಿ ಪರಿಶೀಲಿಸಿ ಮೇಲೆ ಓದಲಾದ ಕ್ರಮಾಂಕ (1) ರ ಆದೇಶದಲ್ಲಿ ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಸದರಿ ಯೋಜನೆಯಡಿ, ಒಟ್ಟು 652 ನಿವೇಶನಗಳನ್ನು ಅಭಿವೃದ್ಧಿ ಪಡಿಸಲು ಉದ್ದೇಶಿಸಲಾಗಿದ್ದು, ಪ್ರಸ್ತುತ ಎಲೆಕ್ಟ್ರಿಕಲ್ ಕಾಮಗಾರಿಗಳಿಗೆ ಪ್ರತ್ಯೇಕವಾದ ಟೆಂಡರ್‌ಗಳನ್ನು ಪ್ರಜಾವಾಣಿ. ಡೆಕನ್ ಹೆರಾಲ್ಡ್, ಈಶಾನ್ಯ ಟೈಮ್ಸ್, ಸಂಜಯವಾಣಿ, ದಿನಪತ್ರಿಕೆಗಳಲ್ಲಿ ಮತ್ತು ರಾಜ್ಯ ಟೆಂಡರ್ ಬುಲೆಟಿನ್ ನಲ್ಲಿ ಪ್ರಕಟಣೆ ಹೊರಡಿಸಿದ್ದು ಟೆಂಡರ್ ದಾಖಲೆಗಳನ್ನು ಸ್ವೀಕರಿಸಿದ್ದು, ದಿನಾಂಕ 31.10.2011 ರಂದು ಪ್ರಾಧಿಕಾರದ ಕಾರ್ಯಲಯದಲ್ಲಿ ಗುತ್ತಿಗೆದಾರರ ಸಮ್ಮುಖದಲ್ಲಿ ಹಾಗೂ ತಾಂತ್ರಿಕ ಪರಿಶೀಲನಾ ಸಮಿತಿಯ ಸಮ್ಮುಖದಲ್ಲಿ ಆರ್ಥಿಕ ಬಿಡ್‌ಗಳನ್ನು ತೆರೆಯಲಾಗಿದ್ದು ಸದರಿ ಟೆಂಡರ್‌ಗಳಲ್ಲಿ ಗುತ್ತಿಗೆದಾರರು ಅನುಮೋದಿತ ಅಂದಾಜು ದರ ಪಟ್ಟಿಗಿಂತ (2009) ಶೇಕಡ 75.28 ರಷ್ಟು ಹಾಗೂ 2010–11 ರ ಚಾಲ್ತಿದರಪಟ್ಟಿಗೆ ಹೊಲಿಸಿದರೆ ಶೇಕಡ 31.81 ರಷ್ಟು ಹೆಚ್ಚಿನ ಮೊತ್ತವಾದ ರೂ. 2,62,94,975 ರೂಗಳ ಮೊತ್ತವನ್ನು ನಮೂದಿಸಿದ ಮೆ॥ ಪ್ರವೀಣ್ ಎಲೆಕ್ಟ್ರಿಕಲ್ಸ್ ಗದಗ್, ರವರು ಸಲ್ಲಿಸಿರುವ ದರವನ್ನು ಅನುಮೋದಿಸಲು ಮೇಲೆ ಓದಲಾದ ಕ್ರಮಾಂಕ (2) ರ ನಡವಳಿಯಲ್ಲಿ ಶಿಫಾರಸ್ಸು ಮಾಡಿದ್ದು ಅದರಂತೆ ದಿನಾಂಕ:21.11.2011 ರಂದು ನಡೆದ ಪ್ರಾಧಿಕಾರದ ಸಭೆಯಲ್ಲಿ ತೀರ್ಮಾನಿಸಿ ಟೆಂಡರ್ ಅನುಮೋದಿಸಲು ನಿರ್ಣಯಿಸಿದಂತೆ ಆಯುಕ್ತರು ಸರ್ಕಾರದ ಅನುಮೋದನೆ ಕೋರಿ ಮೇಲೆ ಓದಲಾದ ಕ್ರಮಾಂಕ (3) ರ ಪತ್ರದಲ್ಲಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಆಯುಕ್ತರ ಪ್ರಸ್ತಾವನೆಯನ್ನು ಸರ್ಕಾರವು ಕೂಲಕುಂಷವಾಗಿ ಪರಿಶೀಲಿಸಿ ಗುತ್ತಿಗೆದಾರರಾದ ಮೆ॥ ಪ್ರವೀಣ್ ಎಲೆಕ್ಟ್ರಿಕಲ್ಸ್ ಗದಗ್, ರವರು ನಮೂದಿಸಿರುವ ದರವು 2010–11 ನೇ ಸಾಲಿನ ದರಪಟ್ಟಿಗೆ ಹೋಲಿಸಿದ್ದಲ್ಲಿ ಶೇಕಡ 31.81 ರಷ್ಟು ಹೆಚ್ಚಾಗುತ್ತದೆಂದು ಹಾಗೂ ಮೆಸ್ಕಾಂ ವೆಬ್‌ಸೈಟ್ ನಿಂದ ಪಡೆದ ಮಾಹಿತಿಯನ್ವಯ ಸ್ಥಳೀಯ ಭತ್ಯೆಗಳು ರಾಯಚೂರಿನಲ್ಲಿ ಶೇಕಡ 15 ರಷ್ಟು ಪ್ರಸ್ತುತ ಹಾಲಿ ಇರುವ ದರಗಳಿಗೆ ಸೇರಿಸಿ ಪ್ರೀಮಿಯಂ ನೀಡಲು ಅವಕಾಶ ಕಲ್ಪಿಸಿರುವ ಹಿನ್ನಲೆಯಲ್ಲಿ, ಗುತ್ತಿಗೆದಾರರು ನಮೂದಿಸಿರುವ ಮೊತ್ತವು ಶೇಕಡ 16.81 ರಷ್ಟಕ್ಕೆ ಮಿತಿಗೊಳ್ಳುವುದರಿಂದ ಹಾಗೂ ಸದರಿ ದರಗಳನ್ನು ಪ್ರಸ್ತುತ ಸಾಲಿನ ದರಪಟ್ಟಿಗೆ ಹೋಲಿಸಿದ್ದಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಕ್ಕಿಂತ ಹೆಚ್ಚಿನ ದರಗಳಾಗಬಹುದೆಂದು ತಾಂತ್ರಿಕ ಕೋಶದ ಅಭಿಪ್ರಾಯದ ಹಿನ್ನಲೆಯಲ್ಲಿ ಮೆ॥ ಪ್ರವೀಣ್ ಎಲೆಕ್ಟ್ರಿಕಲ್ಸ್ ಗದಗ್, ರವರು ನಮೂದಿಸಿರುವ ಟೆಂಡರ್ ದರಗಳನ್ನು ಅನುಮೋದಿಸಲು ತೀರ್ಮಾನಿಸಲಾಗಿದೆ.

ಸರ್ಕಾರವು ಮೇಲಿನ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 216 ಗುಅಪ್ರಾ 2011 ಬೆಂಗಳೂರು, ದಿನಾಂಕ: 03.07.2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ರಾಯಚೂರು ನಗರಾಭಿವೃದ್ದಿ ಪ್ರಾಧಿಕಾರವು ರಾಯಚೂರು–ಮಂತ್ರಾಲಯಂ ರಾಜ್ಯ ಹೆದ್ದಾರಿಗೆ ಹೊಂದಿಕೊಂಡಿರುವ ಸಿದ್ರಾಂಪುರ ಮತ್ತು ಯರಗೇರಾ ರಸ್ತೆಯ ನವೋದಯ ಮೆಡಿಕಲ್ ಕಾಲೇಜು ಹತ್ತಿರ., ರಾಯಚೂರು ತಾಲ್ಲೂಕು ರಾಯಚೂರು ಗ್ರಾಮದ ಸ.ನಂ.1116 ರಿಂದ 1121 ರಲ್ಲಿ ಒಟ್ಟು 21 ಎಕರೆ 38 ಗುಂಟೆ., ಮತ್ತು ಸ.ನಂ.1122 ರಲ್ಲಿನ 29 ಎಕರೆ 23 ಗುಂಟೆ ಒಟ್ಟು ವಿಸ್ತೀರ್ಣ 51 ಎಕರೆ 21 ಗುಂಟೆ ಜಮೀನಿನಲ್ಲಿ ಒಟ್ಟು ರೂ.1398.39 ಲಕ್ಷಗಳ ವೆಚ್ಚದಲ್ಲಿ ವಸತಿ ಯೋಜನೆಯನ್ನು ಕೈಗೆತ್ತಿಕೊಂಡಿರುವ ಕಾಮಗಾರಿಗಳ ಪೈಕಿ ವಿದ್ಯುತ್ ಕಾಮಗಾರಿಗಳ ಟೆಂಡರನ್ನು ರೂ.2,62,94,975.00 ಗಳಿಗೆ ಮೆ॥ ಪ್ರವೀಣ್ ಎಲೆಕ್ಟ್ರಿಕಲ್ಸ್ ರವರು ನಮೂದಿಸಿರುವ ದರಗಳಿಗೆ ಈ ಕೆಳಕಂಡ ಷರತ್ತುಗಳಿಗೊಳಪಡಿಸಿ ಸರ್ಕಾರದ ಅನುಮೋದನೆ ನೀಡಿದೆ.

1) ಸದರಿ ಕಾಮಗಾರಿಯನ್ನು ನಿರ್ವಹಿಸುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯ್ದೆ 1999 ಮತ್ತು ನಿಯಮ 2000ನ್ನು ಪಾಲಿಸತಕ್ಕದ್ದು;

2) ವಿದ್ಯುತ್ ಕಾಮಗಾರಿಗಳನ್ನು ಪೂರ್ಣಗೊಳಿಸಿದ ನಂತರ ಗುಣಮಟ್ಟವನ್ನು ಜೆಸ್ಕಾಂ ಸಂಸ್ಥೆಯ ಇಂಜಿನಿಯರ್‌ಗಳಿಂದ ಪರಿಶೀಲನೆ ನಡೆಸಿ ಸೂಕ್ತ ಪ್ರಮಾಣ ಪತ್ರವನ್ನು ಪಡೆಯತಕ್ಕದ್ದು;

3) ಕಾಮಗಾರಿಗಳ ಬಿಲ್ಲುಗಳನ್ನು ಗುತ್ತಿಗೆದಾರರಿಗೆ ನೀಡುವ ಮುನ್ನ ಸರ್ಕಾರದ ನಿಯಾಮನುಗಳಸಾರ ಕಡಿತಗೊಳಿಸಬೇಕಾದ ಎಲ್ಲಾ ವಸೂಲಾತಿಗಳನ್ನು(ರಿಕವರಿ) ಮುರಿದುಕೊಳ್ಳತಕ್ಕದ್ದು;

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎಂ.ವಾಸುದೇವರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

**ಪಿ.ಆರ್. 1885**

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಸಿ.ಜೆ. ಕೃಷ್ಣಕುಮಾರ್, ತಹಶೀಲ್ದಾರ್ ಗ್ರೇಡ್–2 ಇವರ ಅಮಾನತ್ತು ಆದೇಶವನ್ನು ರದ್ದುಪಡಿಸಿ ಸ್ಥಳ ನಿಯುಕ್ತಿಗೊಳಿಸುವ ಬಗ್ಗೆ.

**ಓದಲಾಗಿದೆ :** (1) ಸರ್ಕಾರದ ಆದೇಶ ಸಂಖ್ಯೆ: ಕಂಇ 24 ಎಡಿಇ 2011 ದಿನಾಂಕ: 4–6–2011.

(2) ಮಾನ್ಯ ಮುಖ್ಯಮಂತ್ರಿಯವರ ದಿನಾಂಕ: 22–6–2012 ರ ಆದೇಶ.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ: (1) ರ ದಿನಾಂಕ: 4–6–2011ರ ಆದೇಶದಲ್ಲಿ, ತರೀಕೆರೆ ತಾಲ್ಲೂಕು ಲಕ್ಕೊಳ್ಳಿ ಗ್ರಾಮದ ಕೃಷಿಕರಾದ ಶ್ರೀ ಹೆಚ್.ಜೆ. ಸುರ್ಜಿತ್ ಬಿನ್ ಜಯರಾಮೇಗೌಡ ಇವರು ದೊಡ್ಡಕುಂದೂರು ಗ್ರಾಮದ ಸರ್ವೆ ನಂ. 3/ಪಿ ರಲ್ಲಿ 47–00 ಎಕರೆ ಜಮೀನಿದ್ದು, ಆ ಜಮೀನನ್ನು ಮಾರಾಟ ಮಾಡುವ ಸಲುವಾಗಿ ಜಮೀನಿನ ದುರಸ್ತಿ ಕೆಲಸ ಸಂಬಂಧ, ಆರೋಪಿತರಾದ ತಹಶೀಲ್ದಾರ್ ಶ್ರೀ ಸಿ.ಜೆ. ಕೃಷ್ಣಕುಮಾರ್ ಹಾಗೂ ಸರ್ವೆಯರ್ ಶ್ರೀ ರಮೇಶ್ ರವರುಗಳು ರೂ. 1.00 ಲಕ್ಷಗಳ ಮೊತ್ತದ ಹಣವನ್ನು ಲಂಚವಾಗಿ ನೀಡುವಂತೆ ಫಿರ್ಯಾದುದಾರರನ್ನು ಒತ್ತಾಯಿಸಿದಾಗ, ಸದರಿ ಹಣವನ್ನು ಕೊಡಲಿಚ್ಛಿಸದ ಫಿರ್ಯಾದುದಾರರು ಲೋಕಾಯುಕ್ತ ಕಛೇರಿಗೆ ದೂರು ನೀಡಿದ್ದರ ಮೇರೆಗೆ, ದಿನಾಂಕ: 29–4–2011 ರಂದು ನಡೆದ ಲೋಕಾಯುಕ್ತ ಟ್ರಾಪ್ ಪ್ರಕರಣದಲ್ಲಿ ಶ್ರೀ ಸಿ.ಜೆ. ಕೃಷ್ಣಕುಮಾರ್, ತಹಶೀಲ್ದಾರ್ ತರೀಕೆರೆ ತಾಲ್ಲೂಕು ಹಾಗೂ ಶ್ರೀ ರಮೇಶ್, ಸರ್ವೆಯರ್ ಇವರುಗಳು ಸಿಲುಕಿದ್ದರ ಹಿನ್ನಲೆಯಲ್ಲಿ, ಶ್ರೀ ಸಿ.ಜೆ.ಕೃಷ್ಣಕುಮಾರ್ ರವರನ್ನು ಕ.ನಾ.ಸೇ (ವ.ನಿ&ಮೇ) ನಿಯಮಾವಳಿ 1957 ರ ನಿಯಮ 10(1)(ಎ) ರನ್ವಯ ಅವರ ವಿರುದ್ಧ ವಿಚಾರಣೆ ಬಾಕಿ ಇರಿಸಿ ಸೇವೆಯಿಂದ ಅಮಾನತ್ತುಗೊಳಿಸಲಾಗಿದೆ.

ಕಂದಾಯ ಇಲಾಖೆಯ 2012–13ನೇ ಸಾಲಿನ ತಹಶೀಲ್ದಾರರ ಸಾಮಾನ್ಯ ವರ್ಗಾವಣೆ ಕಡತ ಸಂಖ್ಯೆ: ಕಂಇ 39 ಎಟಿಎಸ್ 2012 ರಲ್ಲಿ, ಶ್ರೀ ಸಿ.ಜೆ. ಕೃಷ್ಣಕುಮಾರ್, ತಹಶೀಲ್ದಾರ್ ಗ್ರೇಡ್–2 (ಟ್ರಾಪ್ ಕೇಸ್) ಇವರ ನಿಲಂಬನೆಯನ್ನು ರದ್ದುಗೊಳಿಸಿ, ಪುರಸಭಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ದಾವಣಗೆರೆ ಇಲ್ಲಿನ ಖಾಲಿ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಲು ಮೇಲೆ ಓದಲಾದ ಕ್ರಮ ಸಂಖ್ಯೆ: (2) ರಲ್ಲಿ ಮಾನ್ಯ ಮುಖ್ಯಮಂತ್ರಿಯವರು ದಿನಾಂಕ: 22–6–2012 ರಂದು ಆದೇಶಿಸಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 24 ಎಡಿಇ 2011 (ಭಾ), ಬೆಂಗಳೂರು ದಿನಾಂಕ: 29–6–2012.**

ಮೇಲೆ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಶ್ರೀ ಸಿ.ಜೆ. ಕೃಷ್ಣಕುಮಾರ್, ತಹಶೀಲ್ದಾರ್ ಗ್ರೇಡ್–2 (ಟ್ರಾಪ್ ಕೇಸ್) ಇವರ ನಿಲಂಬನೆಯನ್ನು ರದ್ದುಗೊಳಿಸಿ, ಪುರಸಭಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ದಾವಣಗೆರೆ ಇಲ್ಲಿನ ಖಾಲಿ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ವಿ.ರಾಮಲಿಂಗಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3)

**ಪಿ.ಆರ್. 1898**

## ಕಂದಾಯ ಸಚಿವಾಲಯ

**ವಿಷಯ:** ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಗುಂಜೂರು ಗ್ರಾಮದ ಸ.ನಂ.108 ರಲ್ಲಿ 5–00 ಎಕರೆ ಜಮೀನನ್ನು ಶ್ರೀನಿಕೇತನ ಟ್ರಸ್ಟ್(ರಿ) ಇವರಿಗೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** ಪತ್ರ ಸಂಖ್ಯೆ: ಎಲ್ಎನ್‌ಡಿ(ಪೂ) ಸಿಆರ್ 57/2010–11 ದಿನಾಂಕ:10.04.2012.

**ಪ್ರಸ್ತಾವನೆ:**

ಶ್ರೀ ಶ್ರೀ ವಿದ್ಯಾಪ್ರಸನ್ನತೀರ್ಥ ಶ್ರೀ ಪಾದರು, ಶ್ರೀನಿಕೇತನ ಟ್ರಸ್ಟ್(ರಿ) (ಶ್ರೀ ಸಂಪುಟ ನರಸಿಂಹಸ್ವಾಮಿ ಶ್ರೀ ಸುಬ್ರಹ್ಮಣ್ಯ ಮಠ) ಇವರು ದಿನಾಂಕ 08.03.2012ರಲ್ಲಿ ಮನವಿ ಸಲ್ಲಿಸುತ್ತಾ ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಗುಂಜೂರು ಗ್ರಾಮದ ಸ.ನಂ.108 ರಲ್ಲಿ 5–00 ಎಕರೆ ಜಮೀನನ್ನು ಶ್ರೀನಿಕೇತನ ಟ್ರಸ್ಟ್(ರಿ) ಇವರು ಆರ್ಥಿಕವಾಗಿ ಹಿಂದುಳಿದ ಎಲ್ಲಾ ಜನಾಂಗದ ಬಡ ವಿದ್ಯಾರ್ಥಿಗಳಿಗೆ ಸನಾತನ ಧರ್ಮದ ಶಿಕ್ಷಣವಲ್ಲದೆ ಆಧುನಿಕ ಶಿಕ್ಷಣ, ವೃದ್ಧಾಶ್ರಮ, ಯೋಗಶಿಕ್ಷಣ ಕೇಂದ್ರ ಧಾರ್ಮಿಕ ಹಾಗೂ ಇತರೆ ಶೈಕ್ಷಣಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲು ಭೂಮಿ ಮಂಜೂರು ಮಾಡಬೇಕೆಂದು ಕೋರಿರುತ್ತಾರೆ.

ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಗುಂಜೂರು ಗ್ರಾಮದ ಸ.ನಂ.108ರಲ್ಲಿ ಒಟ್ಟು 21.28 ಎ/ಗುಂ ಗೋಮಾಳ ಭೂಮಿ ಲಭ್ಯವಿತ್ತು. ಆ ಭೂಮಿಯಲ್ಲಿ 1.08 ಎಕರೆ/ಗುಂಟೆ ಯನ್ನು ಶ್ರೀ ಬೀರೇಶ್ವರ ದೇವಸ್ಥಾನಕ್ಕೆ ಮೀಸಲಿಡಲಾಗಿದ್ದು, 3.00 ಎಕರೆಯನ್ನು ಆಶ್ರಯ ಯೋಜನೆಗೆ ಮಂಜೂರು ಮಾಡಲಾಗಿದೆ. ಅದಲ್ಲದೆ 0.10 ಗುಂಟೆ ವಿಸ್ತೀರ್ಣದಲ್ಲಿ ಸರ್ಕಾರಿ ಶಾಲೆಯಿದ್ದು, ಉಳಿದ 17.10 ಎಕರೆ/ಗುಂಟೆ ಭೂಮಿ ಖಾಲಿ ಇರುತ್ತದೆ. ಸದರಿ ಭೂಮಿಯು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿದ್ದು ಆ ಸ್ಥಳದಲ್ಲಿ ದನಕರುಗಳ ಮೇವಿಗೆ ಸಾಕಷ್ಟು ಭೂಮಿ ಲಭ್ಯವಿರುತ್ತದೆ. ಶ್ರೀನಿಕೇತನ ಟ್ರಸ್ಟ್(ರಿ) ಶ್ರೀ ಸಂಪುಟ ನರಸಿಂಹಸ್ವಾಮಿ ಶ್ರೀ ಸುಬ್ರಹ್ಮಣ್ಯ ಮಠ ಇವರಿಗೆ 5–00 ಎಕರೆ ಜಮೀನನ್ನು ಮಂಜೂರು ಮಾಡಲು ಜಿಲ್ಲಾಧಿಕಾರಿ, ಬೆಂಗಳೂರು ನಗರ ಇವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಆ ಹಿನ್ನೆಲೆಯಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 432 ಎಲ್‌ಜಿಬಿ 2011 ಬೆಂಗಳೂರು, ದಿನಾಂಕ: 12–07–2012**

ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಗುಂಜೂರು ಗ್ರಾಮದ ಸ.ನಂ. 108ರಲ್ಲಿ 5–00 ಎಕರೆ ಸರ್ಕಾರಿ ಜಮೀನನ್ನು ಕರ್ನಾಟಕ ಭೂ ಕಂದಾಯ ನಿಯಮಗಳ 1966 ನಿಯಮ 97(4)ರಲ್ಲಿನ ಅವಕಾಶದಂತೆ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ, ಸದರಿ ಜಮೀನನ್ನು ಮಾರ್ಗಸೂಚಿ ಬೆಲೆಯ ಶೇ.25 ರಷ್ಟನ್ನು ವಿಧಿಸಿ ಶ್ರೀನಿಕೇತನ ಟ್ರಸ್ಟ್(ರಿ) (ಶ್ರೀ ಸಂಪುಟ ನರಸಿಂಹಸ್ವಾಮಿ ಶ್ರೀ ಸುಬ್ರಹ್ಮಣ್ಯ ಮಠ, ಸುಬ್ರಹ್ಮಣ್ಯ) ಇವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಮಂಜೂರು ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಕೆ.ರಾಮಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ.ಮಂ).

**ಪಿ.ಆರ್. 1889**

## ಕಂದಾಯ ಸಚಿವಾಲಯ

**ವಿಷಯ:–** ಮಂಡ್ಯ ಜಿಲ್ಲೆಯ ಮಂಡ್ಯ ವಿಧಾನ ಸಭಾ ಕ್ಷೇತ್ರಕ್ಕೆ ಆರಾಧನಾ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ:–** ಸರ್ಕಾರದ ಆದೇಶ ಸಂಖ್ಯೆ: ಕಂಇ 111 ಮುಸರ 2008, ದಿನಾಂಕ:25–02–2009

**ಪ್ರಸ್ತಾವನೆ:–**

ಮೇಲೆ ಓದಲಾದ ಆದೇಶದಲ್ಲಿ ಮಂಡ್ಯ ಜಿಲ್ಲೆಯ ಮಂಡ್ಯ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ಕೆಳಕಂಡ ಅಧಿಕಾರಿ : ಅಧಿಕಾರೇತರನ್ನು ನೇಮಿಸಲಾಗಿತ್ತು.

| | | |
|---|---|---|
| 1 | ಮಾನ್ಯ ವಿಧಾನಸಭಾ ಸದಸ್ಯರು, ಮಂಡ್ಯ ವಿಧಾನಸಭಾ ಕ್ಷೇತ್ರ. | ಅಧ್ಯಕ್ಷರು |
| 2 | ಕಾರ್ಯನಿರ್ವಾಹಕ ಅಭಿಯಂತರರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಮಂಡ್ಯ ಜಿಲ್ಲೆ | ಸದಸ್ಯರು |
| 3 | ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ಮಂಡ್ಯ ತಾಲ್ಲೂಕು | ಸದಸ್ಯರು |
| 4 | ತಹಶೀಲ್ದಾರ್, ಮಂಡ್ಯ ತಾಲ್ಲೂಕು, ಮಂಡ್ಯ ಜಿಲ್ಲೆ | ಸದಸ್ಯ ಕಾರ್ಯದರ್ಶಿ |

ಮುಂದುವರೆದು, ಇತರೆ ಅಧಿಕಾರೇತರ ಸದಸ್ಯರನ್ನು ನಂತರ ನಾಮ ನಿರ್ದೇಶನ ಮಾಡಲಾಗುವುದೆಂದು ನಮೂದಿಸಲಾಗಿತ್ತು.

ಆ ಹಿನ್ನಲೆಯಲ್ಲಿ ಪರಿಶೀಲಿಸಿ, ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 32 ಮುಸರ 2012; ಬೆಂಗಳೂರು, ದಿನಾಂಕ: 26ನೇ ಜೂನ್, 2012**

ಮಂಡ್ಯ ಜಿಲ್ಲೆಯ ಮಂಡ್ಯ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ಈ ಕೆಳಕಂಡ ವ್ಯಕ್ತಿಗಳನ್ನು ಅಧಿಕಾರೇತರ ಸದಸ್ಯರನ್ನಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರಮ ಸಂ. | ಹೆಸರು / ವಿಳಾಸ | ಪ್ರವರ್ಗ |
|---|---|---|
| 1 | ಶ್ರೀ ಟಿ.ಕೆ. ಪುಟ್ಟಸ್ವಾಮಿ ಬಿನ್ ಕುಂಟೇಗೌಡ, ತುಂಬಕೆರೆ, ಕಚ್ಚಿಗೆರೆ ಅಂಚೆ, ಮಂಡ್ಯ ತಾಲ್ಲೂಕು | ಸಾಮಾನ್ಯ |
| 2 | ಶ್ರೀಮತಿ ಕೆ. ರಾಧ ಕೋಂ. ಎಸ್.ಬಿ. ಶೇಖರ್, ಸಾತನೂರು ಗ್ರಾಮ & ಅಂಚೆ, ಮಂಡ್ಯ ತಾಲ್ಲೂಕು | ಮಹಿಳೆ |
| 3 | ಶ್ರೀ ಜೆ. ದಾಸಪ್ಪ ಬಿನ್ ಜವರಯ್ಯ, ಬಸರಾಳು ಗ್ರಾಮ & ಅಂಚೆ, ಮಂಡ್ಯ ತಾಲ್ಲೂಕು | ಪರಿಶಿಷ್ಟ ಜಾತಿ |
| 4 | ಶ್ರೀ ನಂಜುಂಡ ಬಿನ್ ನಂಜುಂಡಯ್ಯ, ಶಿವಾರ ಕಾಲೋನಿ, ಮಾರುಗೌಡನಹಳ್ಳಿ ಅಂಚೆ, ಮಂಡ್ಯ ತಾಲ್ಲೂಕು | ಪರಿಶಿಷ್ಟ ಪಂಗಡ |

ಸದರಿ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ:03-02-2001ರ ಪ್ರಕಾರ ಸಂಬಂಧಪಟ್ಟ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಸಮಿತಿಯು ಐದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ; ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ಥಿತ್ವದಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ವಿ.ಶ್ರೀನಿವಾಸ ದೀಕ್ಷಿತ್**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಮುಜರಾಯಿ)

**ಪಿ.ಆರ್. 1890**

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಸಿ.ಜೆ.ಕೃಷ್ಣಕುಮಾರ್, ತಹಶೀಲ್ದಾರ್, ತರೀಕೆರೆ ತಾಲ್ಲೂಕು ಮತ್ತು ಶ್ರೀ ಪಿ. ರಮೇಶ್,ಭೂಮಾಪಕರು, ತಾಲ್ಲೂಕು ಕಛೇರಿ ತರೀಕರೆ,ಚಿಕ್ಕಮಗಳೂರು ಜಿಲ್ಲೆ ಅವರುಗಳ ಮೇಲಿನ ಟ್ರಾಪ್ ಪ್ರಕರಣದಲ್ಲಿ ಅಭಿಯೋಜನಾ ಮಂಜೂರಾತಿ ಕುರಿತು.

**ಓದಲಾಗಿದೆ:** 1) ಅಪರ ಪೋಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ರವರಪತ್ರ ಸಂಖ್ಯೆ:ಲೋಕ್/ಐಎನ್‌ವಿ(ಜಿ) ಎಂ/ಸಿಆರ್/07/2011, ಚಿಕ್ಕಮಗಳೂರು ದಿನಾಂಕ: 16-05-2011

2) ಸರ್ಕಾರದ ಆದೇಶ ಸಂಖ್ಯೆ: ಕಂಇ 24 ಎಡಿಇ 2011, ಬೆಂಗಳೂರು, ದಿನಾಂಕ:04-06-2011

3) ಶ್ರೀಸಿ.ಜೆ. ಕೃಷ್ಣಕುಮಾರ್ ತಹಶೀಲ್ದಾರ್‌ರವರ ಮನವಿ ದಿನಾಂಕ:05.01.2012

4) ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 24 ಎಡಿಇ 2011, ದಿನಾಂಕ:14.05.2012

5) ಅಪರ ಪೋಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ರವರಪತ್ರ ಸಂಖ್ಯೆ:ಲೋಕ್/ಐಎನ್‌ವಿ(ಜಿ)ಎಂ-21/ಸಿಆರ್/07/2011, ಚಿಕ್ಕಮಗಳೂರು ದಿನಾಂಕ:06.06.2012

**ಪ್ರಸ್ತಾವನೆ :**

ಮೇಲೆ ಓದಲಾದಕ್ರಮ ಸಂಖ್ಯೆ(1)ರ ಪತ್ರದಲ್ಲಿ ಅಪರ ಪೋಲೀಸ್ ಮಹಾ ನಿರ್ದೇಶಕರು, ಫಿರ್ಯಾದುದಾರರಾದ ಶ್ರೀ ಹೆಚ್.ಜೆ.ಸುರ್ಜಿತ್ ಬಿನ್ ಜಯರಾಮೇಗೌಡ, ಕೃಷಿಕ, ಲಕ್ಕೊಳ್ಳಿ ಹೋಬಳಿ, ತರೀಕೆರೆ ತಾಲ್ಲೂಕು ಇವರು ದೊಡ್ಡಕುಂದೂರು ಗ್ರಾಮದ ಸ.ನಂ.3/ಪಿರಲ್ಲಿ 47-00 ಎಕರೆ

ಜಮೀನಿದ್ದು, ಆ ಜಮೀನನ್ನು ಮಾರಾಟ ಮಾಡುವ ಸಲುವಾಗಿ ಜಮೀನಿಗಳ ದುರಸ್ಥಿ ಮಾಡಿಸುವ ಸಂಬಂಧ ಸುಮಾರು 1 ವರ್ಷದ ಹಿಂದೆ ಮಾರ್ಚ್ 2010ರಂದು ತರೀಕೆರೆ ತಾಲ್ಲೂಕು ಕಛೇರಿಗೆ ಅರ್ಜಿ ಸಲ್ಲಿಸಿದ್ದರೂ ಜಮೀನುಗಳ ದುರಸ್ಥಿ ಕೆಲಸ ಆಗಿಲ್ಲದಿರುವ ಬಗ್ಗೆ ದಿನಾಂಕ: 08–04–2011ರಂದು ಶ್ರೀ ಸಿ.ಜೆ.ಕೃಷ್ಣಕುಮಾರ್, ತಹಶೀಲ್ದಾರ್‌ರವರನ್ನು ಭೇಟಿ ಮಾಡಿ ವಿಚಾರಿಸಲಾಗಿ, ಜಮೀನುಗಳ ದುರಸ್ಥಿಯ ಸಂಬಂಧ ಅಕ್ರಮ ಸಂಭಾವನೆ ರೂ. 1 ಲಕ್ಷ ಸ್ವೀಕರಿಸುವಾಗ ಪೋಲೀಸರ ಬಲೆಗೆ ಸಿಕ್ಕಿಬಿದ್ದಿರುತ್ತಾರೆ. ಆ ಹಿನ್ನಲೆಯಲ್ಲಿ ಕರ್ನಾಟಕ ಲೋಕಾಯುಕ್ತ ಕಛೇರಿಯ ಅಪರ ಪೋಲೀಸ್ ಮಹಾ ನಿರ್ದೇಶಕರು, ಶ್ರೀ ಸಿ.ಜೆ.ಕೃಷ್ಣಕುಮಾರ್, ತಹಶೀಲ್ದಾರ್‌ರವರನ್ನು ಅಮಾನತ್ತಿನಲ್ಲಿಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿದ್ದರ ಮೇರೆಗೆ ಮೇಲೆ ಓದಲಾದಕ್ರಮ ಸಂಖ್ಯೆ (2) ಆದೇಶದಲ್ಲಿ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಅಮಾನತ್ತುಗೊಳಿಸಲಾಗಿತ್ತು.

ಮೇಲೆ ಓದಲಾದ ಕ್ರಮಸಂಖ್ಯೆ(3)ರ ಪತ್ರದಲ್ಲಿ ಅಮಾನತ್ತಿನಲ್ಲಿರುವ ತಹಶೀಲ್ದಾರರು ಅವರ ಅಮಾನತ್ತಿನ ಅವಧಿ 6 ತಿಂಗಳು ಮುಕ್ತಾಯಗೊಂಡಿರುವುದರಿಂದ 04.01.2012 ರ ನಂತರದ ಅವಧಿಗೆ ಕೆ.ಸಿ.ಎಸ್.ಆರ್ ನಿಯಮ 98(1) ರನ್ವಯ ಜೀವನಾಧಾರ ಭತ್ಯೆಯನ್ನು ಶೇ.75 ರಷ್ಟು ಹೆಚ್ಚಿಸಲು ಕೋರಿರುತ್ತಾರೆ. ಮೇಲೆ ಓದಲಾದ ಕ್ರಮಸಂಖ್ಯೆ(4)ರ ಆದೇಶದಲ್ಲಿ ದಿನಾಂಕ: 04.01.2012 ರ ನಂತರದ ಅಮಾನತ್ತಿನ ಅವಧಿಗೆ KCSR ನಿಯಮ 98(1) ರನ್ವಯ ಜೀವನಾಧಾರ ಭತ್ಯೆಯನ್ನು ಶೇ.75 ರಷ್ಟನ್ನು ಮಂಜೂರು ಮಾಡಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ(5) ಪತ್ರದಲ್ಲಿ ಅಪರ ಪೋಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಚಿಕ್ಕಮಗಳೂರು ರವರು ಸರ್ಕಾರಕ್ಕೆ ಪತ್ರ ಬರೆದು ಈ ಪ್ರಕರಣದ ತನಿಖೆಯನ್ನು ಪೂರ್ಣಗೊಳಿಸಿರುವ ತನಿಖಾಧಿಕಾರಿಯ ಅಂತಿಮ ವರದಿಯ ಪ್ರಕಾರ ಚಿಕ್ಕಮಗಳೂರು ಲೋಕಾಯುಕ್ತ ಠಾಣೆ ಮೊಕದ್ದಮೆ ಸಂಖ್ಯೆ 7/2011ರ ಆರೋಪಿತ ಸರ್ಕಾರಿ ಅಧಿಕಾರಿ/ನೌಕರರಾದ ಶ್ರೀ ಸಿ.ಜೆ.ಕೃಷ್ಣಕುಮಾರ್, ಹಿಂದಿನ ತಹಶೀಲ್ದಾರ್ ತರೀಕೆರೆ (ಹಾಲಿ ಅಮಾನತ್ತಿನಲ್ಲಿರುವ) ಮತ್ತು ಶ್ರೀ ಪಿ.ರಮೇಶ್, ಭೂಮಾಪಕರು, ತಾಲ್ಲೂಕು ಕಛೇರಿ, ತರೀಕೆರೆ ಅವರುಗಳ ವಿರುದ್ಧ ಟ್ರ್ಯಾಪ್ ಪ್ರಕರಣದಲ್ಲಿ ಭ್ರಷ್ಟಾಚಾರ ನಿರ್ಮೂಲನಾ ಕಾಯಿದೆ 1988ರ ಕಲಂ 7 ಮತ್ತು 13(1)(ಡಿ)ಜೊತೆಗೆ 13(2) ಜೊತೆಗೆ ಕಲಂ 109 ಐಪಿಸಿ ಅಡಿಯಲ್ಲಿನ ಆಪಾದನೆಗಳು ಸಾಬೀತಾಗಿರುವುದರಿಂದ ಆರೋಪಿತರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಅರ್ಹರಾಗಿರುವುದರಿಂದ ಸದರಿ ಆರೋಪಿ (1) ಶ್ರೀ ಸಿ.ಜೆ.ಕೃಷ್ಣಕುಮಾರ್, ಹಿಂದಿನ ತಹಶೀಲ್ದಾರ್ ತರೀಕೆರೆ (ಹಾಲಿ ಅಮಾನತ್ತಿನಲ್ಲಿರುವ) ಮತ್ತು ಆರೋಪಿ(2) ಶ್ರೀ ಪಿ.ರಮೇಶ್, ಭೂಮಾಪಕರು, ತಾಲ್ಲೂಕು ಕಛೇರಿ, ತರೀಕೆರೆ ಅವರುಗಳನ್ನು ಅಭಿಯೋಜನೆಗೆ ಒಳಪಡಿಸಲು ಭ್ರಷ್ಟಾಚಾರ ನಿರ್ಮೂಲನಾ ಕಾಯಿದೆ ಕಲಂ 19(1)(ಬಿ) ರನ್ವಯ ಸರ್ಕಾರದ ಮಂಜೂರಾತಿಗೆ ಶಿಫಾರಸ್ಸು ಮಾಡಿರುತ್ತಾರೆ.

ತನಿಖಾ ವರದಿಯಲ್ಲಿನ ಶಿಫಾರಸ್ಸನ್ನು ಪರಿಶೀಲಿಸಿದ ಸರ್ಕಾರವು ಈ ಪ್ರಕರಣದಲ್ಲಿ ಆರೋಪಿತರೆಂದು ಹೇಳಲಾಗಿರುವ ಶ್ರೀ ಸಿ.ಜೆ.ಕೃಷ್ಣಕುಮಾರ್, ಹಿಂದಿನ ತಹಶೀಲ್ದಾರ್ ತರೀಕೆರೆ (ಹಾಲಿ ಅಮಾನತ್ತಿನಲ್ಲಿರುವ) ಮತ್ತು ಶ್ರೀ ಪಿ.ರಮೇಶ್, ಭೂಮಾಪಕರು, ತಾಲ್ಲೂಕು ಕಛೇರಿ, ತರೀಕೆರೆ ಅವರುಗಳ ಅಪರಾಧ ಎಸಗಿರುವುದು ಮೇಲ್ನೋಟಕ್ಕೆ ಸರ್ಕಾರಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಅವರನ್ನು ಲಂಚನಿರೋಧ ಕಾಯ್ದೆ 1988ರ ಅನ್ವಯ ಕಲಂ 7 ಮತ್ತು 13(1)(ಡಿ) ಸಹವಾಚನ ಕಲಂ 13(2) ರಡಿಯಲ್ಲಿ ಅಭಿಯೋಜನೆಗೊಳಪಡಿಸುವುದು ಅವಶ್ಯವೆಂದು ಸರ್ಕಾರ ಮನಗಂಡಿದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತರನ್ನು ಕೆಲಸದಿಂದ ತೆಗೆದುಹಾಕಲು ಅಧಿಕಾರವುಳ್ಳದ್ದಾಗಿರುತ್ತದೆ. ಆದ್ದರಿಂದ ಆಪಾದಿತರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 10(1)(ಎ) ಮತ್ತು 13(3)ರ ಪ್ರಕಾರ ಆಪಾದಿತ ಸಾರ್ವಜನಿಕ ಅಧಿಕಾರಿ/ನೌಕರರಾದ ಶ್ರೀ ಸಿ.ಜೆ.ಕೃಷ್ಣಕುಮಾರ್, ಹಿಂದಿನ ತಹಶೀಲ್ದಾರ್ ತರೀಕೆರೆ (ಹಾಲಿ ಅಮಾನತ್ತಿನಲ್ಲಿರುವ) ಮತ್ತು ಶ್ರೀ ಪಿ.ರಮೇಶ್, ಭೂಮಾಪಕರು, ತಾಲ್ಲೂಕು ಕಛೇರಿ, ತರೀಕೆರೆ ಅವರುಗಳನ್ನು ಕಲಂ 7 ಮತ್ತು 13(1)(ಡಿ) ಸಹವಾಚನ ಕಲಂ 13(2)ರಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಸರ್ಕಾರ ಹೊಂದಿರುತ್ತದೆ. ಅದರಂತೆ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 24 ಎಡಿಇ 2011, ದಿನಾಂಕ:12.07.2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಆರೋಪಿಯಾದ ಶ್ರೀ ಸಿ.ಜೆ.ಕೃಷ್ಣಕುಮಾರ್, ಹಿಂದಿನ ತಹಶೀಲ್ದಾರ್ ತರೀಕೆರೆ (ಹಾಲಿ ಅಮಾನತ್ತಿನಲ್ಲಿರುವ) ಮತ್ತು ಶ್ರೀ ಪಿ.ರಮೇಶ್, ಭೂಮಾಪಕರು, ತಾಲ್ಲೂಕು ಕಛೇರಿ, ತರೀಕೆರೆ ಅವರುಗಳನ್ನು ಹುದ್ದೆಯಿಂದ ತೆಗೆದುಹಾಕುವ ಅಭಿಯೋಜನೆ ಮಾಡುವ ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಶ್ರೀ ಸಿ.ಜೆ.ಕೃಷ್ಣಕುಮಾರ್, ಹಿಂದಿನ ತಹಶೀಲ್ದಾರ್ ತರೀಕೆರೆ (ಹಾಲಿ ಅಮಾನತ್ತಿನಲ್ಲಿರುವ) ಮತ್ತು ಶ್ರೀ ಪಿ.ರಮೇಶ್, ಭೂಮಾಪಕರು, ತಾಲ್ಲೂಕು ಕಛೇರಿ, ತರೀಕೆರೆ ಅವರುಗಳನ್ನು ಭ್ರಷ್ಟಾಚಾರ ಪ್ರತಿಬಂಧಕ ಕಾಯಿದೆಯ 1988ರ ಕಲಂ 7 ಮತ್ತು 13(1)(ಡಿ) ಸಹವಾಚನ ಕಲಂ 13(2)ರ ಪ್ರಕಾರ ಎಸಗಿರುವ ಶಿಕ್ಷಾರ್ಹ ಅಪರಾಧಕ್ಕಾಗಿ ಭ್ರಷ್ಟಾಚಾರ ನಿಯಂತ್ರಣ ಕಾಯಿದೆ 1988ರ ಕಲಂ 19(1)(ಬಿ) ರನ್ವಯ ಅಭಿಯೋಜನೆಗೊಳಿಸಲು ಈ ಮೂಲಕ ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಕರ್ನಾಟಕ ಸರ್ಕಾರದ (ಕಾರ್ಯಕಲಾಪ ನಿರ್ವಹಣೆ ನಿಯಮಗಳು 1977ರ ನಿಯಮ 18 ಮತ್ತು 19(1)ರಡಿಯಲ್ಲಿ ಪ್ರದತ್ತವಾದ ಅಧಿಕಾರದನ್ವಯ ನನ್ನ ಕಛೇರಿಯ ಮೊಹರು ಮತ್ತು ನನ್ನ ಸಹಿಯ ಅಡಿಯಲ್ಲಿ ಈ ದಿನ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ವಿ.ರಾಮಲಿಂಗಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3).

**ಪಿ.ಆರ್. 1888**

## ಕಂದಾಯ ಸಚಿವಾಲಯ

**ವಿಷಯ :** ಶ್ರೀಮತಿ ಬಿ.ಕೆ. ಮಮತ, ತಹಶೀಲ್ದಾರ್, ಸಾರ್ವಜನಿಕ ಜಮೀನುಗಳ ನಿಗಮ ಇವರಿಗೆ ಕೆ.ಸಿ.ಎಸ್.ಆರ್ ನಿಯಮ–60 ರಡಿ ಫ್ರೋಫಾರ್ಮ ಬಡ್ತಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :** (1) ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 260 ಎಎಸ್‌ಡಿ 2011 ದಿನಾಂಕ: 17–4–2012.

(2) ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು ಇವರ ಪತ್ರ ಸಂಖ್ಯೆ: GE I/R3/307 ದಿನಾಂಕ: 23–5–2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ: (1) ದಿನಾಂಕ: 17–4–2012ರ ಅಧಿಸೂಚನೆಯಲ್ಲಿ ಶ್ರೀಮತಿ ಬಿ.ಕೆ. ಮಮತ ಇವರಿಗೆ ತಹಶೀಲ್ದಾರ್ ಗ್ರೇಡ್–2 ವೃಂದದಿಂದ ತಹಶೀಲ್ದಾರ್ ಗ್ರೇಡ್–1 ವೃಂದಕ್ಕೆ ಪದೋನ್ನತಿ ನೀಡಿ ಅವರನ್ನು ತಹಶೀಲ್ದಾರ್, ಸಾರ್ವಜನಿಕ ಜಮೀನುಗಳ ನಿಗಮ, ಜಿಲ್ಲಾಧಿಕಾರಿಗಳ ಕಛೇರಿ, ಬೆಂಗಳೂರು ಜಿಲ್ಲೆ ಇಲ್ಲಿಗೆ ವರ್ಗಾಯಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (2) ರ ದಿನಾಂಕ: 23–5–2012ರ ಪತ್ರದಲ್ಲಿ, ಮಹಾಲೇಖಪಾಲರು ಪದೋನ್ನತಿ ನೀಡಿ ನಿಯೋಜನೆ ಮೇಲೆ ಕರ್ತವ್ಯ ನಿರ್ವಹಿಸುತ್ತಿರುವ ಶ್ರೀಮತಿ ಬಿ.ಕೆ. ಮಮತ, ತಹಶೀಲ್ದಾರ್ ಇವರಿಗೆ ಕೆ.ಸಿ.ಎಸ್.ಆರ್ ನಿಯಮಾವಳಿ 1957 ರ ನಿಯಮ–60 ರಡಿಯಲ್ಲಿ ತಹಶೀಲ್ದಾರ್ ಗ್ರೇಡ್–1 ವೃಂದಕ್ಕೆ ಸ್ಥಾನಪನ್ನ ಬಡ್ತಿ ನೀಡಿ ಪ್ರೋಫಾರ್ಮ ಬಡ್ತಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಸದರಿ ಹುದ್ದೆಯು ಕಂದಾಯ ಇಲಾಖೆಯ ಹುದ್ದೆಯಾಗಿರುವುದಿಲ್ಲ. ಆದ್ದರಿಂದ, ಇವರನ್ನು ಇಲಾಖೇತರ ಹುದ್ದೆಗೆ ನೇಮಿಸಿರುವುದರಿಂದ ಅವರ ವೇತನ ಭತ್ಯೆಗಳನ್ನು ಸಕ್ರಮಗೊಳಿಸಲು, ಫ್ರೋಫಾರ್ಮ ಬಡ್ತಿ ನೀಡಬೇಕಾಗಿದ್ದರ ಹಿನ್ನಲೆಯಲ್ಲಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 245 ಎಎಸ್‌ಡಿ 2012, ಬೆಂಗಳೂರು ದಿನಾಂಕ: 27–6–2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಸರ್ಕಾರವು ಕೆ.ಸಿ.ಎಸ್.ಆರ್ ನಿಯಮ 60 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ದಿನಾಂಕ: 17–4–2012 ರಿಂದ ಜಾರಿಗೆ ಬರುವಂತೆ, ಶ್ರೀಮತಿ ಬಿ.ಕೆ. ಮಮತ ಇವರಿಗೆ ತಹಶೀಲ್ದಾರ್ ಗ್ರೇಡ್–1 ಹುದ್ದೆಗೆ ಫ್ರೋಫಾರ್ಮ ಬಡ್ತಿ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ವಿ.ರಾಮಲಿಂಗಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3).

**ಪಿ.ಆರ್. 1928**

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಎಂ.ಪಿ. ಸಾವಂತ, ಪುರಸಭಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಉತ್ತರ ಕನ್ನಡ ಜಿಲ್ಲೆ ಇವರ ವೈದ್ಯಕೀಯ ವೆಚ್ಚ ಮರುಪಾವತಿ ಕುರಿತು.

**ಓದಲಾಗಿದೆ :** (1) ಜಿಲ್ಲಾಧಿಕಾರಿಗಳು, ಉತ್ತರ ಕನ್ನಡ ಜಿಲ್ಲೆ ಇವರ ಪತ್ರ ಸಂಖ್ಯೆ: ಎಸಿಟಿ –3/ಇತರೆ/ಸಿಆರ್/45/2010–11 ದಿನಾಂಕ: 16–3–2011.

(2) ಜಿಲ್ಲಾಧಿಕಾರಿಗಳು, ಉತ್ತರ ಕನ್ನಡ ಜಿಲ್ಲೆ ಇವರ ಪತ್ರ ಸಂಖ್ಯೆ: ಎಸಿಟಿ/3/ಇತರೆ/ವಿವ/45/2010–11 ದಿನಾಂಕ: 28–1–2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ: (1) ರ ದಿನಾಂಕ: 16–3–2011 ರ ಪತ್ರದಲ್ಲಿ, ಜಿಲ್ಲಾಧಿಕಾರಿಗಳು, ಉತ್ತರ ಕನ್ನಡ ಜಿಲ್ಲೆ ಇವರು ಶ್ರೀ ಎಂ.ಪಿ. ಸಾವಂತ, ಪುರಸಭಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಉತ್ತರ ಕನ್ನಡ ಜಿಲ್ಲೆ ಇವರು ಅವರ Left upper limb monoparesis Cerebrovasculer accident right MCA Territory infarct Hypertension ಕಾಯಿಲೆಯ ಕುರಿತು ಕಾರವಾರಕ್ಕೆ ಸಮೀಪದಲ್ಲಿರುವ ಅಪೋಲೋ ಆಸ್ಪತ್ರೆ ಮಡಗಾಂವ, ಗೋವಾದಲ್ಲಿ ದಾಖಲಾಗಿ ತುರ್ತು ಚಿಕಿತ್ಸೆಯನ್ನು ಪಡೆದುಕೊಂಡಿದ್ದು, ಈ ಆಸ್ಪತ್ರೆಯು ಗೋವಾ ಸರಕಾರದಿಂದ ಗೋವಾ ರಾಜ್ಯದ ಸರಕಾರಿ ನೌಕರರಿಗೆ ವೈದ್ಯಕೀಯ ಚಿಕಿತ್ಸೆಯನ್ನು ಪಡೆಯಲು ಮಾನ್ಯತೆಯನ್ನು ನೀಡಿದ ಖಾಸಗಿ ಆಸ್ಪತ್ರೆಯಾಗಿದೆ ಎಂದು ತಿಳಿಸುತ್ತಾ, ಶ್ರೀ ಎಂ.ಪಿ. ಸಾವಂತ, ಪುರಸಭಾ ತಹಶೀಲ್ದಾರ್ ಇವರು ತುರ್ತು ಪರಿಸ್ಥಿತಿಯಲ್ಲಿ ಸದರಿ ಆಸ್ಪತ್ರೆಯಲ್ಲಿ ಚಿಕಿತ್ಸೆಯನ್ನು ಪಡೆದಿರುವುದರಿಂದ ಪ್ರಕರಣವನ್ನು ವಿಶೇಷ ಪ್ರಕರಣವೆಂದು ಪರಿಗಣಿಸಿ ಕರ್ನಾಟಕ ವೈದ್ಯಕೀಯ ಹಾಜರಾತಿ ನಿಯಮಗಳು 1963 ರ ನಿಯಮ–31 ರ ಪ್ರಕಾರ ಅವರ ವೈದ್ಯಕೀಯ ಚಿಕಿತ್ಸೆಗೆ ತಗುಲಿದ ವೈದ್ಯಕೀಯ ವೆಚ್ಚ ರೂ. 32,608/– ಮಾತ್ರಗಳನ್ನು ಮಂಜೂರು ಮಾಡಲು ಕೋರಿರುತ್ತಾರೆ.

ಈ ಹಿನ್ನಲೆಯಲ್ಲಿ ಜಿಲ್ಲಾಧಿಕಾರಿ, ಉತ್ತರ ಕನ್ನಡ ಜಿಲ್ಲೆ ಇವರನ್ನು ಸದರಿ ಅಧಿಕಾರಿಗಳು ಸರ್ಕಾರಿ ಆಸ್ಪತ್ರೆಯಲ್ಲಿ ಚಿಕಿತ್ಸೆಯನ್ನು ಪಡೆದಿದ್ದಲ್ಲಿ ಎಷ್ಟು ಖರ್ಚು ಬರುತ್ತಿತ್ತು ಎಂಬುದನ್ನು ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ರವರಿಂದ ಖಚಿತ ಪಡಿಸಿಕೊಂಡು ಸರ್ಕಾರಕ್ಕೆ ತಿಳಿಸುವಂತೆ ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ: (2) ರ ದಿನಾಂಕ: 28–1–2012 ರ ಪತ್ರದಲ್ಲಿ ಜಿಲ್ಲಾಧಿಕಾರಿ, ಉತ್ತರ ಕನ್ನಡ ಜಿಲ್ಲೆ ಇವರು ಶ್ರೀ ಎಂ.ಪಿ. ಸಾವಂತ, ಪುರಸಭಾ ತಹಶೀಲ್ದಾರ್ ಇವರ ವೈದ್ಯಕೀಯ ವೆಚ್ಚ ರೂ. 32,608/– ಗಳಿಗೆ ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಇವರು ರೂ. 23,323/– ಗಳ ಅರ್ಹತಾ ಮೌಲ್ಯವನ್ನು ನಿರ್ಧರಿಸಿಕೊಟ್ಟಿರುತ್ತಾರೆಂದು ತಿಳಿಸಿರುತ್ತಾರೆ.

ಜಿಲ್ಲಾಧಿಕಾರಿ, ಉತ್ತರ ಕನ್ನಡ ಜಿಲ್ಲೆ ಇವರ ಮೇಲ್ಕಂಡ ಪ್ರಸ್ತಾವನೆಯನ್ನು ಪರಿಶೀಲಿಸಿ ಶ್ರೀ ಎಂ.ಪಿ. ಸಾವಂತ, ಪುರಸಭಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಾರ್ಯಾಲಯ ಉತ್ತರ ಕನ್ನಡ ಜಿಲ್ಲೆ ಇವರಿಗೆ ಕರ್ನಾಟಕ ವೈದ್ಯಕೀಯ ಹಾಜರಾತಿ ನಿಯಮಗಳು 1963 ರ ನಿಯಮ–31 ರಡಿಯಲ್ಲಿ ವೈದ್ಯಕೀಯ ಮರುಪಾವತಿಗೆ ರೂ. 23,323/– ಗಳನ್ನು (ರೂಪಾಯಿ ಇಪ್ಪತ್ತಮೂರು ಸಾವಿರದ ಮುನ್ನೂರ ಇಪ್ಪತ್ತಮೂರು ಮಾತ್ರ) ಮಂಜೂರು ಮಾಡಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 321 ಎಎಸ್‌ಡಿ 2011, ಬೆಂಗಳೂರು ದಿನಾಂಕ: 27–6–2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಶ್ರೀ ಎಂ.ಪಿ. ಸಾವಂತ, ಪುರಸಭಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಾರ್ಯಾಲಯ ಉತ್ತರ ಕನ್ನಡ ಜಿಲ್ಲೆ ಇವರಿಗೆ ಕರ್ನಾಟಕ ವೈದ್ಯಕೀಯ ಹಾಜರಾತಿ ನಿಯಮಗಳು 1963 ರ ನಿಯಮ–31 ರಡಿಯಲ್ಲಿ ವೈದ್ಯಕೀಯ ಮರುಪಾವತಿಗೆ ರೂ. 23,323/– ಗಳನ್ನು (ರೂಪಾಯಿ ಇಪ್ಪತ್ತಮೂರು ಸಾವಿರದ ಮುನ್ನೂರ ಇಪ್ಪತ್ತಮೂರು ಮಾತ್ರ) ಮಂಜೂರು ಮಾಡಿ ಆದೇಶಿಸಿದೆ.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 34 ಎಸ್‌ಎಂಆರ್ 2011 ಬೆಂಗಳೂರು, ದಿನಾಂಕ: 28–9–2011 ರಲ್ಲಿ ಪ್ರತ್ಯಾಯೋಜಿಸಿದ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ವಿ.ರಾಮಲಿಂಗಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

**ಪಿ.ಆರ್. 1929**

ಕಂದಾಯ ಇಲಾಖೆ (ಸೇವೆಗಳು–3).

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಆರ್.ಜಿ. ನಾಡಗೇರ, ತಹಶೀಲ್ದಾರ್ ಗ್ರೇಡ್–I, ವಿಶೇಷ ಭೂಸ್ವಾಧೀನಾಧಿಕಾರಿ ಹಾಗೂ ಎಸ್ಟೇಟ್ ಅಧಿಕಾರಿಗಳ ಕಛೇರಿ, ರಾಷ್ಟ್ರೀಯ ಹೆದ್ದಾರಿ, ಕೆ.ಆರ್. ಸರ್ಕಲ್, ಪಿ.ಡಬ್ಲ್ಯೂಡಿ ಕಾಂಪೌಂಡ್, ಬೆಂಗಳೂರು–560 001 ಇವರಿಗೆ ನಾಲ್ಕು ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** (1) ಶ್ರೀ ಆರ್.ಜಿ. ನಾಡಗೇರ, ತಹಶೀಲ್ದಾರ್ ಇವರ ಮನವಿ ಪತ್ರ ದಿನಾಂಕ: 15–3–2012.

(2) ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು ಇವರ ಪತ್ರ ಸಂಖ್ಯೆ: GE I/R5/Vol-533/2012–13/316 ದಿನಾಂಕ: 4–6–2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ: (1) ದಿನಾಂಕ: 15–3–2012 ರ ಪತ್ರದಲ್ಲಿ, ಶ್ರೀ ಆರ್.ಜಿ. ನಾಡಗೇರ, ತಹಶೀಲ್ದಾರ್ ರವರು ತಹಶೀಲ್ದಾರ್ ಗ್ರೇಡ್–1 ವೃಂದಕ್ಕೆ ಡಿಸೆಂಬರ್ 1995 ರಲ್ಲಿ ಬಡ್ತಿ ಹೊಂದಿದ್ದು, ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 10 ಅಸೇವ 2009 ದಿನಾಂಕ: 9–12–2011 ರ ಪ್ರಕಾರ ಕೆ.ಎ.ಎಸ್ (ಕಿ.ಶ್ರೇ) ಗೆ ಪದೋನ್ನತಿ ಹೊಂದಿ ದಿನಾಂಕ: 6–2–2012 ರಂದು ಕರ್ತವ್ಯಕ್ಕೆ ಹಾಜರಾಗಿದ್ದು, ತಹಶೀಲ್ದಾರ್ ಗ್ರೇಡ್–1 ಹುದ್ದೆಯ ವೇತನ ಶ್ರೇಣಿ ರೂ. 14,050–25,050 ರಲ್ಲಿ ದಿನಾಂಕ: 1–1–2009 ಕ್ಕೆ ರೂ. 25,050/– ಗರಿಷ್ಠ ವೇತನವನ್ನು ತಲುಪಿದ್ದು, ದಿನಾಂಕ 1–1–2010 ರ ನಂತರದ ಅವಧಿಯಲ್ಲಿ ವೇತನ ಬಡ್ತಿಯನ್ನು ಪಡೆದಿರುವುದಿಲ್ಲವೆಂದು ಮತ್ತು ಸದರಿಯವರು ಸರ್ಕಾರಿ ಸೇವೆಯಿಂದ ದಿನಾಂಕ: 30–6–2012 ರಂದು ವಯೋನಿವೃತ್ತಿ ಹೊಂದುವುದರಿಂದ ಸ್ಥಗಿತ ವೇತನ ಬಡ್ತಿಯನ್ನು ಮಂಜೂರು ಮಾಡಿ ನಂತರ ಪದೋನ್ನತಿ ಹುದ್ದಯ ವೇತನ ನಿಗದಿಯಾಗಿ ನಿವೃತ್ತಿ ಪಿಂಚಣಿ ಪಡೆಯಲು ಅನುಕೂಲವಾಗುತ್ತದೆಂದು ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (2) ರ ದಿನಾಂಕ: 4–6–2012 ರ ಪತ್ರದಲ್ಲಿ, ಮಹಾಲೇಖಪಾಲರು ಶ್ರೀ ಆರ್.ಜಿ. ನಾಡಗೇರ, ತಹಶೀಲ್ದಾರ್ ಗ್ರೇಡ್–1 ರವರು ವೇತನ ಶ್ರೇಣಿ ರೂ. 14,050–25,050 ರಲ್ಲಿ ದಿನಾಂಕ: 1–1–2008 ಕ್ಕೆ ರೂ. 25,050/– ಗರಿಷ್ಠ ವೇತನವನ್ನು ತಲುಪಿದ್ದು, ಈ ಕೆಳಗಿನಂತೆ ಅವರಿಗೆ ನಾಲ್ಕು ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ.

(1) ಮೊದಲನೇ ಸ್ಥಗಿತ ವೇತನ ಬಡ್ತಿ – ದಿನಾಂಕ: 1–1–2009.

(2) ಎರಡನೇ ಸ್ಥಗಿತ ವೇತನ ಬಡ್ತಿ – ದಿನಾಂಕ: 1–1–2010.

(3) ಮೂರನೇ ಸ್ಥಗಿತ ವೇತನ ಬಡ್ತಿ – ದಿನಾಂಕ: 1–1–2011.

(4) ನಾಲ್ಕನೇ ಸ್ಥಗಿತ ವೇತನ ಬಡ್ತಿ – ದಿನಾಂಕ: 1–1–2012.

ಮಹಾಲೇಖಪಾಲರ ಪತ್ರದ ಹಿನ್ನಲೆಯಲ್ಲಿ, ಶ್ರೀ ಆರ್.ಜಿ. ನಾಡಗೇರ, ತಹಶೀಲ್ದಾರ್ ಗ್ರೇಡ್–1, ವಿಶೇಷ ಭೂಸ್ವಾಧೀನಾಧಿಕಾರಿ ಹಾಗೂ ಎಸ್ಟೇಟ್ ಅಧಿಕಾರಿಗಳ ಕಛೇರಿ, ರಾಷ್ಟ್ರೀಯ ಹೆದ್ದಾರಿ, ಬೆಂಗಳೂರು–560 001 ರವರಿಗೆ ನಾಲ್ಕು ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 151 ಎಎಸ್‌ಡಿ 2012, ಬೆಂಗಳೂರು ದಿನಾಂಕ: 3–7–2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಸರ್ಕಾರವು ಶ್ರೀ ಆರ್.ಜಿ. ನಾಡಗೇರ, ತಹಶೀಲ್ದಾರ್ ಗ್ರೇಡ್–1, ವಿಶೇಷ ಭೂಸ್ವಾಧೀನಾಧಿಕಾರಿ ಹಾಗೂ ಎಸ್ಟೇಟ್ ಅಧಿಕಾರಿಗಳ ಕಛೇರಿ, ರಾಷ್ಟ್ರೀಯ ಹೆದ್ದಾರಿ, ಬೆಂಗಳೂರು –560 001 ರವರಿಗೆ ಈ ಕೆಳಗಿನಂತೆ ನಾಲ್ಕು ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡಿ ಆದೇಶಿಸಿದೆ.

(1) ಮೊದಲನೇ ಸ್ಥಗಿತ ವೇತನ ಬಡ್ತಿ – ದಿನಾಂಕ: 1–1–2009.

(2) ಎರಡನೇ ಸ್ಥಗಿತ ವೇತನ ಬಡ್ತಿ – ದಿನಾಂಕ: 1–1–2010.

(3) ಮೂರನೇ ಸ್ಥಗಿತ ವೇತನ ಬಡ್ತಿ – ದಿನಾಂಕ: 1–1–2011.

(4) ನಾಲ್ಕನೇ ಸ್ಥಗಿತ ವೇತನ ಬಡ್ತಿ – ದಿನಾಂಕ: 1–1–2012.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ವಿ.ರಾಮಲಿಂಗಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

**ಪಿ.ಆರ್. 1899**

ಕಂದಾಯ ಇಲಾಖೆ (ಸೇವೆಗಳು–3).